ಮಾಸಲು ಬಿಳಿ ಎನ್ನಬಹುದು–ರೆಂಬೆಗಳಿಂದ ತೊಂಗುತ್ತವೆ. ಕಸಕುಪ್ಪೆ ಸಂಗ್ರಹವಾಗಿರುವ ಪ್ರದೇಶಗಳಲ್ಲೂ, ಮೈದಾನ ಭೂಮಿಯಲ್ಲೂ ಈ ಗಿಡದ ವಾಸ. ನಾಲ್ಕೈದಡಿ ಎತ್ತರ ಬೆಳೆಯುವ ಪೊದರು ಗಿಡ. ದೊಡ್ಡ ಎಲೆಗಳು. ಹೂ ಬಿಟ್ಟಾಗ ದೂರದಿಂದ ನೋಡಲು ಕಣ್ಣಿಗೆ ಇಂಪು, ಹತ್ತಿರ ಬಂದಾಗ ಮೂಗಿಗೆ ಗಬ್ಬು ಕಂಪು. ಕಾಯಿ ಎರಡು ಮೂರಂಗುಲ ವ್ಯಾಸದ ಚೆಂಡು; ಮೈಮೇಲೆಲ್ಲ ಹಲಸಿನಕಾಯಿಗಿಂತಲೂ ಮೊನಚಾದ ಮುಳ್ಳು ಹೊದ್ದಿಕೆ. ಕಾಯೊಳಗೆ ನೂರಾರು ಕಪ್ಪು ಬೀಜಗಳು.

ಉನ್ಮತ್ತದ ಕತೆ ಪಾತಕಿಯ ಕತೆ. ಮೈತುಂಬ ವಿಷ; ಕಾಯಿ, ಬೀಜಗಳಲ್ಲಿ ಅಧಿಕ ಪ್ರಮಾಣದ ಸಂಗ್ರಹ. ತಿಂದವನು ಸತ್ತೇ ಹೋಗಿಬಿಡುತ್ತಾನೆ ಎಂದು ಹೇಳುವುದು ಕೆಲವು ಸಲ ಉತ್ಪ್ರೇಕ್ಷೆಯ ಮಾತಾಗಬಹುದು; ಆದರೆ ತಿಂದ ಪ್ರಮಾಣ ಹೆಚ್ಚಾದಾಗ ಈ ಮಾತು ನಿಜವಾಗುತ್ತದೆ. ಈ ಗಿಡದಲ್ಲೂ ಹತ್ತಾರು ಬಗೆಯ ಆಲ್ಕಲಾಯ್ಡ್ ಎಂಬ ರಸಾಯನಿಕ ಸತ್ವಗಳಿವೆ. ಒಂದಕ್ಕಿರುವ ಗುಣ ಇನ್ನೊಂದಕ್ಕಿಲ್ಲ. ಎರಡು ಮೂರು ಆಲ್ಕಲಾಯ್ಡುಗಳ ಸಂಯೋಜನೆಯಿಂದ ಒಂದು ಗುಣ ಹೊರಪಡುವುದೂ ಉಂಟು; ನಾಡುವೈದ್ಯದಲ್ಲಿಯೂ ಆಯುರ್ವೇದದಲ್ಲಿಯೂ ಗರ್ಭಪಾತಕ್ಕೆ ಉನ್ಮತ್ತ ಬೀಜದಿಂದ ತಯಾರಿಸಿದ ಮದ್ದನ್ನು ಕೊಡುತ್ತಾರೆ. ಒಣಎಲೆಯ ಅಥವಾ ಕುಟ್ಟಿದ ಬೀಜದ ಧೂಮಪಾನವನ್ನು ಮಾಡಿ ಮೈಮರೆಯುವ ಸುಖವನ್ನು ಅನುಭವಿಸುವವರೂ ಉಂಟು; ಈ ಸಾಹಸಕ್ಕೆ ತಯಾರಾಗಿಲ್ಲದವರು ಎಲೆ–ಅಡಿಕೆಯೊಡನೆ ಅಗೆಯುವುದೂ ಉಂಟು. ಮಿತ ಪ್ರಮಾಣದಲ್ಲಿ ಸೇವಿಸಿದಾಗ ಅಫೀಮು ಗಾಂಜಾಗಳ ಸೇವನೆಗಿರುವ ಗುಣಗಳು ಉನ್ಮತ್ತಕ್ಕೂ ಸ್ವಲ್ಪ ಇರುವುದಾದ್ದರಿಂದ. ಉನ್ಮತ್ತದ ಸೇವನೆ ಗೀಳು ಹಿಡಿಸುವಂಥದು–'ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ'; ತಿರುಗಿ ತಿರುಗಿಯೂ ಬೇಕೆನ್ನಿಸುತ್ತದೆಯಂತೆ.

## ಎಕ್ಕೆ (*Calotropis gigantea* R. Br.)

ಪರ್ಯಾಯ ಪದಗಳು:

ಕನ್ನಡ: ಎಕ್ಕ, ಎರುಕ

ಸಂಸ್ಕೃತ: ಅರ್ಕ, ಆದಿತ್ಯ, ಶ್ವೇತಾರ್ಕ (ಬಿಳಿಎಕ್ಕ)

ಚಂಡೇಶ ಪಿಳ್ಳೆಯು (ಹರಿಹರ: ಚಂಡೇಶ ಪಿಳ್ಳೆಯ ರಗಳೆ) ಶಿವಲಿಂಗಕ್ಕೆ ಅರ್ಪಿಸಿದ ಹೂಗಳಲ್ಲಿ ಇದೊಂದು. ಹೂವಿಗೆ ವಾಸನೆಯೇನೋ ಇದೆ. ಆದರೆ ನನ್ನಂಥವರ ಮೂಗಿಗೆ ಹಿತವಾದದ್ದೇನೂ ಅಲ್ಲ. ಕೀಟಗಳೂ ನೊಣಗಳೂ ಎಕ್ಕದ ಹೂವಿಗೆ ಆಕರ್ಷಿತವಾಗುವುದು ಈ 'ಪರಿಮಳ'ದಿಂದಲೇ.

ಬಯಲು ಸೀಮೆಯ ಹರಳು ಭೂಮಿಯ ಪೊದರು ಗಿಡ ಇದು; ಕೆಲವೆಡೆಗಳಲ್ಲಿ ಹದಿನೈದಡಿ ಎತ್ತರ ಬೆಳೆಯುತ್ತದೆ. ಕಳ್ಳಿಯಂತೆ ಹಾಲು ಸುರಿಸುತ್ತದೆ. 'ಹಾಲು' ವಿಷಸಂಯೋಜಿತವಾದದ್ದು. ಚರ್ಮದೊಳಕ್ಕೆ ಮುಳ್ಳು ಹೊಕ್ಕು ಮುರಿದಾಗ, ಆ ತುಂಡನ್ನು ಹೊರಕ್ಕೆ ಸೆಳೆಯುವುದಕ್ಕಾಗಿ ಈ ಹಾಲಿನ ಒಂದೆರಡು ತೊಟ್ಟುಗಳನ್ನು ಆ ದೇಹಭಾಗದ ಮೇಲೆ ಸವರುವುದು ನಾಡುವೈದ್ಯ (Folk medicine) ದ ಪ್ರಯೋಗವಾಗಿರುವುದಾದರೂ ಆಯುರ್ವೇದದ ಮಂಜೂರಾತಿಯಿಲ್ಲ. ನಾಡುವೈದ್ಯದ ಈ ಬಳಕೆ ಸ್ವಲ್ಪ ಅಪಾಯಕಾರಿಯಾದದ್ದೇ. ಎಕ್ಕದ ಹಾಲು ರಕ್ತವನ್ನು ಸೇರಿದ್ದೇ ಆದರೆ 'ಪರಂಗಿ' ವೈದ್ಯವನ್ನು ಮೊರೆಹೊಗಬೇಕಾಗುತ್ತದೆ!

ಎಕ್ಕದಲ್ಲಿ ಎರಡು ಪ್ರಭೇದಗಳಿವೆ: (1) ಶ್ವೇತಾರ್ಕ (ಬಿಳಿಎಕ್ಕ). ಇದರ ಹೂ ಮಾತ್ರ ಬಿಳಿಯ ಬಣ್ಣ, ಎರಡನೆಯ ಪ್ರಭೇದಕ್ಕಿಂತ ಇದು ಶ್ರೇಷ್ಠ ಎಂಬ ನಂಬಿಕೆಯಿದೆ. ಆದೇಕೋ? ಶ್ವೇತಾರ್ಕಗಣಪತಿ ಇದರ ಬೇರಿನಿಂದ 'ಉದ್ಭವ'ವಾಗುತ್ತಾನೆಂದಿರಬಹುದೆ? ಹರಳುಗಲ್ಲಿನ ಭೂಮಿಯ ಕೊರಕಲುಗಳಲ್ಲಿ ಕೆಲವು ಸಲ ಬೇರುಗಳು ಒಂದರೊಡನೊಂದು ಸಿಕ್ಕುಹಾಕಿಕೊಂಡು ಬೆಳೆದಿರುತ್ತವೆ. ಇಂಥ ಬುಡವನ್ನು ಅಗೆದಾಗ ಬೇರುಗಂಟಿನ ಹೊರನೋಟವು ಚಿತ್ರ ವಿಚಿತ್ರಾಕೃತಿಗಳನ್ನು ತಾಳಿರುತ್ತದೆ. ಇಂಥದೊಂದು, ಡೊಳ್ಳುಹೊಟ್ಟೆಯ ಗಿಡ್ಡುದೇಹದ ಸೊಟ್ಟಕೈಕಾಲು ಗ್ರಂಥಿಗಳ ತೊಂಗು ಸೊಂಡಿಲ ಗುರುತುಗಳಿಗೆ ಅನುವಾಗಿರುವುದಾದರೆ, ಅದೇ ಗಣಪತಿಯ ವಿಗ್ರಹವಾಗಿ ಆರಾಧನೆಗೊಳಪಡುತ್ತದೆ. (2) ಇದರ ಹೂ 'ಕೆಂಪು' ಬಣ್ಣವನ್ನು ಅಲ್ಲಲ್ಲಿ ಸವರಿಕೊಂಡಿರುತ್ತದೆ. 'ಕೆಂಪು' ಎಂದರೆ ರಕ್ತದ ಕೆಂಪು ಅಲ್ಲ. ಸರಿಯಾಗಿ ಹೇಳು

"ಬೆಳಿಬೆಳೆದು ನಳನಳಿಸಿ ಮಘಮಘಿಸುತಲರ್ದ ಇರುವಂತಿ" ಎನ್ನುತ್ತಾನೆ ಹರಿಹರ. ಎಂದರೆ ಮಲ್ಲಿಗೆಯಂತೆ ಇದೂ ಎಲೆಯ ಮರೆಯಲ್ಲಿ ಅರಳುವ ಹೂ.

ಶಾಸ್ತ್ರದೃಷ್ಟಿಯಿಂದ ಈ ಗಿಡ ಜಾಸ್ಮಿನಮ್ಮಿನ ಸ್ಪೀಷೀಸುಗಳಲ್ಲೊಂದು. 'ಎರಡು ಸುತ್ತಿನ ಮಲ್ಲಿಗೆ'ಯೇ ಇರುವಂತಿಗೆ ಎಂದು ನನ್ನ ಅಭಿಪ್ರಾಯ. ತಮಿಳಿನಲ್ಲಿಯೂ ಈ ಹೂವಿಗೆ ಇರುವಾಚ್ಚಿ ಎನ್ನುತ್ತಾರೆ; ಈ ಪದದ ಮೊದಲನೆಯ ಭಾಗ 'ಎರಡು' ಎಂಬುದನ್ನೇ ಸೂಚಿಸುತ್ತದೆ. ಹೂವಿನ ದಳಗಳು ಎರಡು ಒತ್ತಾದ ಸುತ್ತುಗಳಲ್ಲಿ ಹರಡಿರುತ್ತವೆ, ನರಗಂಪು ಸೂಸುತ್ತವೆ.

ಇತರ ಮಲ್ಲಿಗೆ ಜಾತಿಗಳ ಹರವೇ ಇರುವಂತಿಗೆಯದೂ– ಸ್ವಾಭಾವಿಕವಾದ ನೆಲೆ ಬೆಟ್ಟಗುಡ್ಡಗಳ ಕಾಡು; ಕೃತಕ ನೆಲೆ ಊರು, ಮನೆ, ತೋಟ. (ಮಲ್ಲಿಗೆಗೆ ಟಿಪ್ಪಣಿ ನೋಡಿ)

## ಉತ್ತರಣಿ (Achyranthes aspera L.)

ಪರ್ಯಾಯ ಪದಗಳು:

ಕನ್ನಡ: ಉತ್ತರಾಣಿ, ಉತ್ತರಣೆ, ಉತ್ತರೇಣಿ, ಉತ್ರಾಣಿ.
ಸಂಸ್ಕೃತ: ಅಪಾಮಾರ್ಗ.

ಅಥರ್ವವೇದೋಕ್ತವಾದದ್ದು ಈ ಗಿಡ. ಎಲ್ಲವನ್ನೂ ಜಯಿಸುವುದೆಂಬ ಖ್ಯಾತಿ ಪಡೆದಿದೆ; ಎಲ್ಲ ಜಾಡ್ಯಗಳನ್ನೂ ಗುಣಪಡಿಸುವ ಓಷಧಿ. ಸ್ವಾಭಾವಿಕ ಮತ್ತು ಕೃತಕ ಶತ್ರುಗಳನ್ನು ಕೊಲ್ಲುತ್ತದೆ. ದೈವಿಕ ಪಕ್ಷಿಯಾದ ಸುಪರ್ಣದ ಕಣ್ಣಿಗೆ ಈ ಗಿಡ ಮೊದಲು ಗೋಚರವಾಗಿ ನೃಷದನ ಮಗನಾದ ಕಣ್ವನಿಂದ ಆಶೀರ್ವಾದ ಪಡೆಯಿತಂತೆ. ಕ್ಷೇತ್ರಿಯವೆಂಬ ಬೇನೆಯನ್ನು ವಾಸಿಮಾಡುತ್ತದೆಯಂತೆ.

ಉದ್ಭುದ್ಧವಾದ (ಕೆಲವು ಸಲ ಎರಡು ಮೂರು ಅಡಿಗಳಷ್ಟೂ ಇರಬಹುದು) ತೆನೆಗಳು ಹೂಗಳನ್ನು ತಳೆಯುತ್ತವೆ. ಈ ಹೂವನ್ನು ನೋಡಿ ಸಸ್ಯಶಾಸ್ತ್ರ ಪರಿಚಯವಿಲ್ಲದವರು "ಇದೂ ಒಂದು ಹೂವೇ?" ಎಂದು ಅಪಹಾಸ್ಯ ಮಾಡಿ ನಗಲೂ ಬಹುದು. ಹೂವಿನ ಗಾತ್ರ ಸಣ್ಣ, ಸೀಕಲು. ದಳಗಳಿಗೆ ಆಕರ್ಷಕವಾದ ಬಣ್ಣವಾಗಲಿ ರೂಪವಾಗಲಿ ಇಲ್ಲ; ಶೂಲಾಕೃತಿಯ ಪೊರುಕುಗಳಂತಿರುತ್ತವೆ. ಬಲಿತಾಗ ಮುಳ್ಳಿನಂತೆ ಕುಕ್ಕುತ್ತವೆ.

ಹೂವು ಕಾಯಾದಾಗ ಹಿಂದು ಮುಂದಾಗಿ ತಿರುಗುತ್ತದೆ; ಬಲಿತ ಎಲೆಗಳೂ ಸ್ವಲ್ಪ ಹೀಗೆಯೇ. ಇದರಿಂದಾಗಿ ಗಿಡಕ್ಕೆ ಅಪಾಮಾರ್ಗವೆಂಬ ಹೆಸರು ಸಂದಿರಬಹುದು.

ಭಾರತಾದ್ಯಂತವೂ 'ಕಳೆ'ಯಾಗಿ ಹರಡಿಕೊಂಡಿರುವ ಕುರುಚಲು ಗಿಡ ಇದು. ತುಂಬು ಎಲೆಯಿದ್ದಾಗಲೂ ಕಡ್ಡಿಕಡ್ಡಿಯಾಗಿ ಬಿಟ್ಟುಕೊಂಡಿರುತ್ತದೆ. ಬಲಿತ ದಳಗಳಂತೆ ಕಾಯೂ ಮುಳ್ಳು. ಹಾದು ಹೋದಾಗ ಬಟ್ಟೆಬರೆಗಳಿಗೆ ಸಿಕ್ಕುಕೊಳ್ಳುತ್ತದೆ. ಗಿಡಕ್ಕಾಗಲಿ, ಹೂಕಾಯಿಗಳಿಗಾಗಲಿ ಅಂದಚೆಂದಗಳಿಲ್ಲ. 'ವೇದವಾಸನೆ'ಯಿಂದಲೋ ಏನೋ ಹರಿಹರನ ಕಾಲದಲ್ಲಿ ಶಿವಪೂಜೆಗೆ ಅರ್ಹವಾಗಿತ್ತು.

## ಉನ್ಮತ್ತ (*Datura alba* Wall.)

ಪರ್ಯಾಯ ಪದಗಳು:

ಕನ್ನಡ:ಉಮ್ಮತ್ತಿ, ಉಂಬತ್ತ, ದತ್ತೂರಿ, ಮದುಗುಣಿಕೆ
ಸಂಸ್ಕೃತ: ಧುತ್ತೂರ, ಕನಕ, ಉನ್ಮತ್ತ

ಇದರ ಹೂ ಹೇಗೋ ಶಿವನ ಶಿರಸ್ಸನ್ನು ಹತ್ತಿ ಕುಳಿತುಬಿಟ್ಟಿದೆ. ಸುಭಾಷಿತಕಾರನಿಗೂ ಇದೇ ಸಂಶಯ–ಹೋಗಿ ಹೋಗಿ ಚಂದ್ರನ ಸಮಸಮಕ್ಕೆ ಶಿವನ ಜಟೆಯಲ್ಲಿ ಶೋಭಿಸುತ್ತಿದೆಯಲ್ಲ! ಚಂದ್ರನಂತೆ ಉನ್ಮತ್ತದ ಹೂ ನೈದಿಲನ್ನೇನೂ ಅರಳಿಸುವುದಿಲ್ಲ, ಕತ್ತಲೆಯನ್ನು ಹೋಗಲಾಡಿಸುವುದಿಲ್ಲ, ನಲ್ಲನ ಭಗ್ನ ಹೃದಯದ ನೋವನ್ನು ಹೆಚ್ಚಿಸುವುದಿಲ್ಲವಲ್ಲ! (ಶಾರ್ಙ್ಗಧರ ಪದ್ಧತಿ, 1058; ಸುಭಾಷಿತ ರತ್ನಾಕರ, 1–2)

ತುತ್ತೂರಿ ರೂಪದ ಆರೇಳಂಗುಲ ಉದ್ದದ ಬಿಳಿ ಹೂಗಳು–ಅಚ್ಚಬಿಳಿ ಎನ್ನುವುದಕ್ಕಿಂತಲೂ

ಹೆಸರುಗಳು ಸಿಗುತ್ತವೆ. ಶಿವಾರ್ಚನೆಗೂ ವಿಷ್ಣುವಿನ ಪೂಜೆಗೂ ಅರ್ಹವೆಂದು ನಂಬಲಾಗಿದ್ದ ಹೂಗಳನ್ನು 'ನಾಯನ್ಮಾರು'ಗಳೂ ವೀರಶೈವ ಮತಾವಲಂಬಿಗಳೂ'ಆಳ್ವಾರು'ಗಳೂ ಆಗಾಗ್ಗೆ ಕುರಿತಿದ್ದಾರೆ. ಇಲ್ಲಿಯೂ ಅಷ್ಟೆ–ಬರಿಯ ಹೆಸರುಗಳು; ಕೆಲವು ಸಲ ಆಯಾ ದೇವರಿಗೆ ಯಾವುದೋ ಒಂದು ಬಗೆಯ ಹೂವೋ ಎಲೆಯೋ ಪ್ರಿಯವಾದ ರೀತಿ, ಅದಕ್ಕೊಂದು ಉಪಕತೆ ಇಷ್ಟರಲ್ಲಿ ಮುಗಿಯುತ್ತದೆ.

ಹೀಗಾಗಿ ಕಾವ್ಯೋಕ್ತವಾಗಿರುವ ಅನೇಕ ಬಗೆಯ ಗಿಡಮರಗಳ ಅನನ್ಯತೆಯನ್ನು ಗುರುತಿಸುವುದು ಪ್ರಸ್ತುತದಲ್ಲಿ ಕಷ್ಟವಾಗಿದೆ. ಕಷ್ಟವಾದರೂ ಸಾಮಾನ್ಯವಾಗಿ ಅಸಾಧ್ಯವಾದದ್ದಲ್ಲ. ಕಾವ್ಯಗಳನ್ನು ಸಸ್ಯ ಶಾಸ್ತ್ರೀಯ ದೃಷ್ಟಿಯಿಂದ ಅರ್ಥಮಾಡಿಕೊಂಡರೆ ಅನೇಕ ಗಿಡಮರಗಳ ಅನನ್ಯತೆಯನ್ನು ಸ್ವಲ್ಪಮಟ್ಟಿಗಾದರೂ ಖಚಿತವಾಗಿ ನಿರ್ದೇಶಿಸಬಹುದು. ಇಂಥ ಪ್ರಯತ್ನ ಇನ್ನೂ ನಡೆಯಬೇಕಾಗಿದೆ.

'ಪುಷ್ಪ ರಗಳೆ'ಯಲ್ಲಿ ಹರಿಹರನು ಸುಮಾರು 30 ಗಿಡಮರಗಳನ್ನು ಹೆಸರಿಸಿದ್ದಾನೆ. ಇವುಗಳಲ್ಲಿ ಬಹುಪಾಲು ತಂತಮ್ಮ ದೇಹದ ಒಂದಲ್ಲ ಒಂದು ಭಾಗದಲ್ಲಿ ಯಾವುದೋ ಒಂದು ಬಗೆಯ ವಾಸನೆಯನ್ನು ಹೊತ್ತಿರುವಂಥವು. ಮರುಗ, ದೊಡ್ಡಪತ್ರೆ, ದವನ, ಭದ್ರಮುಖಿಗಳಲ್ಲಿ ಪರಿಮಳವಿರುವುದು ಆಯಾ ಎಲೆಗಳಲ್ಲಿ; ಇತರ ಗಿಡಮರಗಳಲ್ಲಿರುವುದು ಅದರದರ ಹೂಗಳಲ್ಲಿ. ಬಹುಪಾಲು ಹಿತವಾದ ವಾಸನೆಯುಳ್ಳವು; ಎಕ್ಕ, ಉಮ್ಮತ್ತಿಗಳದು ಗಬ್ಬು. ಯಾವ ವಿಧವಾದ ವಾಸನೆಯನ್ನೂ ಸೂಸದವು ಉತ್ತರಣೆ, ತುಂಬೆ ಹೂಗಳು; ಬೆಲ್ಲಪತ್ರೆ.

"ಕಕ್ಕೆ ಎಕ್ಕೆ ತುಂಬೆ ಕಂಚವಾಳಿ ಮುಂತಾದ ಸಾಧಾರಣವಾದ, ಸುಂದರವಾದುವೆಂದೆನಿಸಿಕೊಳ್ಳಲಾಗದ... ಹೂಗಳು" ಎಂದಿದ್ದಾರೆ ಶ್ರೀ 'ಸುಜನಾ' (ಪ್ರ. ಕ. 46, ಪುಟ 175). ಇದು ವೈಯಕ್ತಿಕವಾದ ಅಭಿಪ್ರಾಯ. ಹೂ ಹೊದ್ದ ಕಕ್ಕೆಯ ನೋಟಕ್ಕೆ ಹರ್ಷಪಡದವರು ಅಪರೂಪ. ಗೊಂಚಲು ಗೊಂಚಲಾಗಿ ಎಕ್ಕೆ ಹೂ ತಳೆದಾಗ ಅದರ ಸೊಬಗು ನಯನಮನೋಹರವಾದದ್ದು. ಕಂಚವಾಳದ ಹೂ ಬಿರಿದಾಗ, ಕಾಯಿ ಬಿಟ್ಟಾಗ, ಎಲೆ ತುಂಬಿದಾಗ, ಹೂವಿನ ದಳಗಳು ಮರದ ಹೆಜ್ಜೆಯ ಸುತ್ತ ಉದುರಿ ರಂಗುಗಂಬಳಿಯನ್ನು ಹಾಸಿದಾಗ ಹೊಮ್ಮುವ ಸೌಂದರ್ಯಕ್ಕೆ ಅನೇಕರು ಬೆರಗಾಗಿದ್ದಾರೆ. ತುಂಬೆ ಗಿಡವಾಗಲಿ, ಅದು ಹೂ ತಳೆದ ನೋಟವಾಗಲಿ ಆಕರ್ಷಕವಾಗಿರದೆಂದು ನಾನೂ ಒಪ್ಪಿಕೊಳ್ಳುತ್ತೇನೆ. ಹೂವಿನ ಗಾತ್ರ ಸಣ್ಣದು. ಶುಭ್ರ ಬಿಳಿಯ ಬಣ್ಣ. ಬಿಡಿ ಹೂವಿನ ರಚನೆಗೆ ಸಸ್ಯಶಾಸ್ತ್ರಜ್ಞನು ಮಣಿಯುತ್ತಾನೆಯೇ ಹೊರತು ಜನಸಾಮಾನ್ಯನಾಗಲಿ ರಸಜ್ಞನಾಗಲಿ ಅಲ್ಲ. ಹೇಗೋ ಶಿವನಿಗೆ ನಂಟು ಬಿದ್ದಿದೆ.

ಹರಿಹರನು ಹೇಳುವ ಅನೇಕ ಪತ್ರ ಪುಷ್ಪಗಳು ಶಿವನಿಗೆ ಅರ್ಪಿತವಾದವು. ಕೆಲವಂತೂ ಶಿವನ ಪ್ರತ್ಯೇಕ ಅಂಗಾಂಗಗಳಿಗೆ ಮೀಸಲಾದವು. ಪಚ್ಚೆಳಿಯು ಕತ್ತುರಿ (ತಿಲಕ)ಯಾಯಿತು. ಇರುವಂತಿಗೆಯು ಮುಡಿಯಲ್ಲಿ ಶೋಭಿಸಿತು; ಸೇವಂತಿಗೆಯು ಅಕ್ಕಪಕ್ಕಗಳಿಗೆ ಅನುವಾಯಿತು; ಮಲ್ಲಿಗೆಯು ಚಂದನವಾಯಿತು; ಮೊಲ್ಲೆ ಮೊಗ್ಗು ನಾಗಕುಂಡಲವಾಯಿತು; ತಾವರೆಯು(ಕಮಲ) ಚರಣವನ್ನು ಸೇರಿತು; ಕುಮುದವು ಪಕ್ಕಗಳನ್ನು ಅಲಂಕರಿಸಿತು; ಮರುಗವು ಗಜಚರ್ಮವಾಯಿತು. ಮಾವು ಈ ಬಗೆಗೆ ಸೇರಲಿಲ್ಲ. ಹೂ ಎಲೆಗಳನ್ನು ಸಂಗ್ರಹಿಸಿಯಾದ ಬಳಿಕ ಮಾಮರನ ಕಪ್ಪುನೆರಳಿನಲ್ಲಿ ಬಂದು ಕುಳಿತುಕೊಂಡ, ಹರಿಹರ ಅಷ್ಟೆ. ಬಾಳೆಲೆಯನ್ನು ಹರಡಿದ. ಹೂಗಳನ್ನು ಅದರ ಮೇಲೆ ಮೃದುವಾಗಿ ಸುರಿದ. ತಾವರೆಯ ಕಾಂಡವನ್ನು ಸೀಳಿ ನಾರಿನಿಂದ ಮಾಲೆಯನ್ನು ಹೆಣೆದ. ಗುಡಿಗೆ ಬಂದು ಶಿವನಿಗೆ ಅರ್ಪಿಸಿದ. ಶಿವ ಮೆಚ್ಚಿದ. ಹರಿಹರ ಧನ್ಯನಾದ.

## ಇರುವಂತಿ (*Jasminum Sambac* Ait. Var. *Virupaksi*)

ಪರ್ಯಾಯ ಪದಗಳು:

ಕನ್ನಡ: ಇರುವು, ಇರುವತಿಗೆ, ಇರುವಂತಿ, ಇರುವಂತಿಗೆ.

ರತಿಗೆ ಮುಡಿಯುವುದಕ್ಕೂ ಮದನನ ತುರುಬಿಗೆ ಏರಿಸುವುದಕ್ಕೂ ಅರ್ಹತೆ ಪಡೆದದ್ದು ಇರುವಂತಿಗೆ (ಪಂಪ). ಗಿಳಿಯ ಕಣ್ಣಿಗೆ ಬೀಳದೆ, ಮಾರುತನ ಚಲನೆಗೆ ಸಿಕ್ಕದೆ, ಸೂರ್ಯನ ಬೆಳಕು ಮುಟ್ಟದೆ

ಬಿ. ಜಿ. ಎಲ್. ಸ್ವಾಮಿ

# ಹರಿಹರನ 'ಪುಷ್ಪರಗಳೆ': ಸಸ್ಯಶಾಸ್ತ್ರೀಯ ಮತ್ತು ಸಾಂಸ್ಕೃತಿಕ ಟಿಪ್ಪಣಿ

ಕನ್ನಡ ಕಾವ್ಯಗಳಲ್ಲಿ ನೂರಾರು ಗಿಡಮರಗಳ ಹೆಸರುಗಳು ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಬಹುಪಾಲು ಕನ್ನಡನಾಡಿನಲ್ಲಿಯೇ ಬೆಳೆಯುತ್ತಿದ್ದವೆಂದೂ, ಕವಿಗಳಿಗೆ ಪರಿಚಿತವಾಗಿದ್ದವೆಂದೂ ಊಹಿಸಬಹುದಾದರೂ ಆಯಾ ಗಿಡಮರಹೂಗಳ ನೇರವಾದ ಪರಿಚಯ ಅವರಲ್ಲಿ ಎಷ್ಟುಮಂದಿಗೆ ಎಷ್ಟುಮಟ್ಟಿಗೆ ಇದ್ದಿರಬಹುದೆಂಬ ಪ್ರಶ್ನೆಯನ್ನೆತ್ತುವುದು ಅಧಿಕಪ್ರಸಂಗಿತನವಾಗದಷ್ಟೆ. ಬಹುಪಾಲು ಕವಿಗಳಿಗೆ ಸಸ್ಯಗಳೂ ಸಸ್ಯೋತ್ಪನ್ನವಾದ ಎಲೆಹೂಕಾಯಿಗಳೂ ಶಬ್ದಾಲಂಕಾರಕ್ಕೋ ವಾಗಾಡಂಬರಕ್ಕೋ ಒದಗುವ ಬರಿಯ ಮಾತುಗಳಾದವೇ ಹೊರತು ಆ ವಸ್ತುಗಳ ಅಂದಚೆಂದಗಳಿಗಾಗಲಿ, ರಚನಾವಿಶೇಷಗಳಿಗಾಗಲಿ, 'ಪ್ರತಿಮೆ'ಗಳಿಗಾಗಲಿ ಅನುವಾಗುವ ಆಕರಗಳಾಗಲಿಲ್ಲ. ಕನ್ನಡ ಕವಿಗಳಿಗಿಂತ ಹಳಬರಾದ ಅನೇಕ ಸಂಸ್ಕೃತ ಕವಿಗಳೂ ಈ ಮನೋವೃತ್ತಿಗೆ ಹೊರಗಲ್ಲ. 11ನೆಯ ಶತಮಾನದ ಒಂದಿಬ್ಬರು ಕನ್ನಡ ಜೈನ ಕವಿಗಳನ್ನು ಬಿಟ್ಟರೆ ತಮ್ಮದೇ ಆದ ಕಣ್ಣುಗಳಿಂದ ಸಸ್ಯಗಳನ್ನು ಕಂಡ ಕವಿಗಳು ಕನ್ನಡದಲ್ಲಂತೂ ಇಲ್ಲವೆಂದೇ ಹೇಳಬೇಕು. ಬಹುಸಂಖ್ಯಾತರು ತಲೆತಲಾಂತರದಿಂದ ಬಳುವಳಿಯಾಗಿ ಪಡೆದುಕೊಂಡು ಬಂದಿದ್ದ ಕವಿಸಮಯಗಳಿಗೆ ಶರಣುಹೊಡೆದವರೇ ಆಗಿದ್ದಾರೆ.

ನಮ್ಮ ಪೂರ್ವಿಕರಿಗೆ ಗಿಡಮರಗಳ ವಿಷಯದಲ್ಲಿ ತಾತ್ಸಾರ ಭಾವವಿತ್ತೆಂದು ನಾನು ಹೇಳುತ್ತಿಲ್ಲ. ತೋಟಗಳನ್ನೂ ಉದ್ಯಾನಗಳನ್ನೂ ತೋಪುಗಳನ್ನೂ ನೆಡಿಸಿ ಕಾಪಾಡಿದ ಅನೇಕ ನಿದರ್ಶನಗಳು ಸಾಹಿತ್ಯದಲ್ಲಿಯೂ ಶಾಸನದಲ್ಲಿಯೂ ಕಾಣಬರುತ್ತವೆ. ಆದರೆ ಇಂಥ ಗೆಯ್ಮೆಗಳು ಬಹುಪಾಲು ನಡೆದಿರುವುದು ದೇವರ ಸೇವೆ, ಜನರ ಸೇವೆ ಎಂಬ ಅರ್ಥಗಳಲ್ಲಿ. ಸ್ವಂತಭೋಗಕ್ಕಾಗಿ ಹೂದೋಟಗಳನ್ನು ನಿರ್ಮಿಸಿಕೊಂಡ ಸಂದರ್ಭಗಳು ಹೆಚ್ಚಾಗಿ ದೊರಕವು. ಕೆಲವು ರಾಜಮಹಾರಾಜರು ಇಂಥ ಉದ್ಯಾನಗಳನ್ನು ಏರ್ಪಡಿಸಿಕೊಂಡಿದ್ದರು ಎಂಬುದು ಅಪರೂಪವಾಗಿ ಕಾಣಿಸಿಕೊಳ್ಳುತ್ತದೆ. ಇದು ನಿಜವೇ ಆಗಿರಬಹುದಾದರೂ ಅವರು ತಮ್ಮ ನೈಜವಾದ ಪುಷ್ಪಪ್ರೇಮದಿಂದ ಇವನ್ನು ಆಗಮಾಡಿಸಿಕೊಂಡರೆಂದು ನನಗನ್ನಿಸದು. ಎಷ್ಟಾದರೂ ರಾಜ, ಎಲ್ಲ ಸದ್ಗುಣಗಳ ನಿಧಿ, ಎಲ್ಲ ಬಗೆಯ ಕಸಬುಗಳಿಗೂ ಕಲೆಗಳಿಗೂ ಪೋಷಕ, ಇಷ್ಟೇ ಅಲ್ಲದೆ ರಾಜಮರ್ಯಾದೆಯೆಂಬುದೊಂದಿದೆಯಲ್ಲವೆ!–ಹೀಗೆ ಸ್ಥಾನಗೌರವದ ಗುರುತಾಗಿ, ಪ್ರತಿಷ್ಠೆಯ ಸಂಕೇತವಾಗಿ ಪುಷ್ಪವಾಟಿಕೆಗಳನ್ನು ನಿರ್ಮಿಸಿಕೊಂಡಿದ್ದಿರಬೇಕು ಎಂದು ಊಹಿಸುವುದೇ ಸಾಧುವಾದದ್ದೆಂದು ತೋರುತ್ತದೆ.

ಇನ್ನು ತೋಪುಗಳು, ನಂದನ ವನಗಳು– ಇವುಗಳ ನಿರ್ಮಾಣವೆಲ್ಲ ದೇವರ ಪೂಜಾನೈವೇದ್ಯಗಳಿಗೆ. ಹೂಗಳು ಪರಿಮಳಗೊಂಡವಾಗಿರಬೇಕೆಂದೂ ಹಣ್ಣುಗಳು ಮಧುರವಾಗಿರಬೇಕೆಂದೂ ಒಪ್ಪಿಕೊಂಡಿದ್ದರೇ ಹೊರತು ಹೂವಿನ ಸೊಬಗನ್ನು ಗಮನಿಸಿದಂತಿಲ್ಲ. ಸ್ವಂತ ಅಲಂಕಾರಕ್ಕಾಗಿಯೂ ಹೂಗಳನ್ನು ಬಳಸಿದರು; ಅದೂ ಇದೇ ದೃಷ್ಟಿಯಿಂದಲೇ.

ಮಧ್ಯಕಾಲದ ಶೈವ ಮತ್ತು ವೈಷ್ಣವ ಕನ್ನಡ, ತಮಿಳು ಸಾಹಿತ್ಯದಲ್ಲಿಯೂ ಗಿಡಮರ ಹೂಗಳ

ನಾವು ಸಾಮಾನ್ಯವಾಗಿ ಕಂಚುವಾಳ ಎಂದು ನಿರ್ದೇಶಿಸುವ ದ್ರುಮವಿಶೇಷದಲ್ಲಿ ಐದಾರು ಸ್ಪೀಷೀಸ್‌ಗಳು ಕಲೆತಿವೆ. ಸಸ್ಯಶಾಸ್ತ್ರ ರೀತಿಯಿಂದ ಇವನ್ನು ಬೇರ್ಪಡಿಸಲು ಸಾಧ್ಯ..

ಈ ಸಣ್ಣಮರ ದಕ್ಷಿಣ ಭಾರತದ ಎಲೆಯುದುರುವ ಕಾಡುಗಳಲ್ಲಿ ಬೆಳೆಯುತ್ತದೆ. ಎಲೆ ತುಂಬಿದ ಮರವೂ ಸೊಗಸು, ಹೂ ತಳೆದ ಮರವೂ ಸೊಗಸು. ಬಿಡಿಹೂವೂ ಸೊಗಸು. ಊರುಗಳಲ್ಲೂ ಮನೆಗಳಲ್ಲೂ ಬೆಳೆಸುತ್ತಾರೆ. ಎಲೆಯ ರೂಪರೇಖೆಯು ದನದ ಗೊರಸಿನಾಕೃತಿಯಲ್ಲಿರುವುದರಿಂದ ಮರಕ್ಕೆ ಬಸವನ ಪಾದವೆಂಬ ಅಡ್ಡಹೆಸರು ದತ್ತವಾಗಿದೆ.

ಹೂದಳಗಳು ಸಾಮಾನ್ಯವಾಗಿ ಬಿಳಿಬಣ್ಣದವು; ಕೆಲವು ಜಾತಿಗಳಲ್ಲಿ ಊದಾ ಬಣ್ಣದವಾಗಿರಬಹುದು, ಬಿಳಿದಳದ ಮೇಲೆ ಊದಾಬಣ್ಣದ ಗೆರೆ ಚುಕ್ಕೆ ಚಿತ್ತಾರಗಳಿರಬಹುದು. ಹೂವಿನ ಅಡ್ಡಳತೆ 2–2½ ಅಂಗುಲ; ಸಡಿಲವಾದ ಗೊಂಚಲುಗಳಲ್ಲಿ ಕೊನರುತ್ತವೆ. ತುದಿರೆಂಬೆಗಳಿಂದ ಉದ್ಭವಿಸುವ ಗೊಂಚಲುಗಳು ಹಸುರೆಲೆ ಛಾವಣಿಗೆ ಅಲಂಕಾರ ಮಾಡಿದಂತಿರುತ್ತದೆ. ಕಾಯಿಗಳು ಎಲೆ ಸಂದುಗಳಿಂದ ತೊಂಗುತ್ತವೆ. ಈ ನೋಟವೂ ಚೆಂದವೇ.

ಕಂಚವಾಳ ಹೂವಿನ ಸೊಬಗನ್ನು ಅನುಭವಿಸಿದವನು ಜಾನಪದ ಕವಿ. ಕೋಲಾರ ಜಿಲ್ಲೆಯಲ್ಲಿ ಪ್ರಚಾರದಲ್ಲಿರುವ ಹಾಡಿನ ನುಡಿಯೊಂದು ಹೀಗಿದೆ:

"ಕೆಂಚಾದರೇನಂತೆ
ಕಂಚಾಳ ಮುಡಿದವಳೆ
ಲಂಚ ಬೇಡಂತಾಳೆ, ಮದುವ್ಯಾಗು"

ಹುಡುಗಿಯ ಬಣ್ಣ ಕೆಂಪು ಎಂಬ ಕಾರಣದಿಂದ ಹುಡುಗ ಮದುವೆಗೆ ಒಪ್ಪಲಿಲ್ಲ. ಅವನ ತಾಯಿ ಹೀಗೆ ಸಮಾಧಾನ ಹೇಳಿದಳು.

### ಕರ್ಪೂರ (*Cinnamomum Camphora* Nees)

ವಿರೂಪಾಕ್ಷನಿಗೆ ಕಾಣಿಸಿದ ದೀಪಾರಾಧನೆಯ ಸಂದರ್ಭದಲ್ಲಿ ಹರಿಹರನು ಈ ವಸ್ತುವನ್ನು ಪ್ರಸ್ತಾಪಿಸಿದ್ದಾನೆ.

ಕರ್ಪೂರವನ್ನು ಸ್ರವಿಸುವ ಮರ ನಮ್ಮ ದೇಶದಲ್ಲಿ ಬೆಳೆಯದು, ಹಿಂದೆಂದೂ ಬೆಳೆದದ್ದೂ ಅಲ್ಲ. ಈ ಶತಮಾನದ ಆದಿಯಲ್ಲಿ ಕರ್ಪೂರದ ತೌರೂರಾದ ಚೈನಾ ಜಪಾನ್‌ಗಳಿಂದ ಆಮದು ಮಾಡಿಕೊಂಡು ಕೆಲವು ಮರಗಳನ್ನು ಪ್ರಯೋಗಾರ್ಥವಾಗಿ ತಿರುವಾಂಕೂರು ನೀಲಗಿರಿ ಕಾಡುಗಳಲ್ಲಿ ಕೃಷಿಗೆ ಒಳಪಡಿಸಲಾಗಿದೆ.

ಕ್ರಿ. ಶ. 10ನೆ ಶತಮಾನದ ಹೊತ್ತಿಗೇ ಈ ವಸ್ತು ದಕ್ಷಿಣ ಭಾರತಕ್ಕೆ ಪರಿಚಯವಾಗಿತ್ತು–ಪೆಸಿಫಿಕ್ ದ್ವೀಪಗಳು–ಚೈನಾ– ಭಾರತದ ಪೂರ್ವತೀರ, ಇವುಗಳ ಹರವಿನಲ್ಲಿ ನಡೆಯುತ್ತಿದ್ದ ವಾಣಿಜ್ಯದ ಮೂಲಕ. ಮರದಿಂದ ಕರ್ಪೂರವನ್ನು ಬೇರ್ಪಡಿಸಿ ಹದನು ಮಾಡುವ ವಿಧಾನವೂ ಚೈನಾದೇಶದಲ್ಲಿ ಉತ್ಪನ್ನವಾದದ್ದೇ.

ಚರಕ ಶುಶ್ರುತರ ಗ್ರಂಥಗಳಲ್ಲಿ ಈ ವಸ್ತುವಿನ ಔಷಧೀಯ ಗುಣಗಳನ್ನು ನಿರೂಪಿಸಲಾಗಿದೆ. ಕರ್ಪೂರವು ಬೆಂಕಿಯ ಸೋಂಕಿಗೆ ಉರಿಯುತ್ತದೆಂಬುದನ್ನು ನಮ್ಮ ಪೂರ್ವಿಕರು ಅರಿತಿದ್ದರು. ದೇವಾಲಯಗಳಲ್ಲಿ ಕರ್ಪೂರಾರತಿಯನ್ನು ಬೆಳಗಿಸಿದರು. ಕರ್ಪೂರ ಉರಿದು ವಾಯುವಿನಲ್ಲಿ ಲೀನವಾಗುವುದನ್ನು ಕಂಡು ತಾತ್ತ್ವಿಕಾರ್ಥಗಳನ್ನೂ ವ್ಯಾಖ್ಯಾನಗಳನ್ನೂ ಮುಂದಿಟ್ಟರು. ಅಂತೂ ಹೊರದೇಶದಿಂದ ಬಂದು ನೆಲಸಿದ ಕರ್ಪೂರ ಕಾಲಕ್ರಮೇಣ ನಮ್ಮದೇ ಆಗಿ ನಮ್ಮ ಸಂಸ್ಕೃತಿಯಲ್ಲಿ ಲೀನವಾಗಿ ಹೋಯಿತು!

### ಚೂತ (*Mangifera indica* L.)

ಪರ್ಯಾಯ ಪದಗಳು:
ಕನ್ನಡ: ಮಾವು, ಮಾವಿನ ಮರ
ಸಂಸ್ಕೃತ: ಅಮ್ರ, ಚೂತ

**ಕೇತಕಿ** (*Pandanus tectorius* Soland)

ಪರ್ಯಾಯಪದಗಳು:

ಕನ್ನಡ: ಕೇದಿಗೆ, ತಾಳೆ

ಹಕ್ಕಿಯ ಗರಿಯ ಗಾಳಿ ಸೋಕಿದರೆ ಕೂಡ ಅನೇಕ ಹೂಗಳ ಎಸಳು ಕುಂದುತ್ತದೆ, ಒಮ್ಮೆ ಹೀರಿದರೆ ಕಂಪು ಸುರಿದು ಹೋಗುತ್ತದೆ; ಆದರೆ ಕೇತಕಿ ಹೀಗಲ್ಲ, ತಿರುಗಿ ತಿರುಗಿ ಹೀರಿದರೂ ಸೌರಭ ಮುಗಿದು ಹೋಗದು–ಹೀಗೆಂದುಕೊಂಡು ಮದಾಳಿಗಳು ಹೂವಿಗೆ ಸುತ್ತಿಸುತ್ತಿ ಮುತ್ತಿ ಬರುತ್ತಿದ್ದವಂತೆ (ಪಂಪ). ಹೀಗೆ ದುಂಬಿಗೂ ಕೇತಕಿಗೂ ಒಂದು ಬಲವಾದ ಸಂಬಂಧ ಏರ್ಪಟ್ಟಿದೆ–ಕಾವ್ಯದಲ್ಲಿ. ವಾಸ್ತವಿಕತೆಯಲ್ಲಿ ಕೇತಕಿಯ ಕಂಪಿಗೆ ಮರುಳಾಗುವುದು ದುಂಬಿ ಮಾತ್ರವಲ್ಲ, ಅನೇಕ ಬಗೆಯ ಕೀಟಗಳೂ ಪರಾಗ ಭಕ್ಷಣೆಗಾಗಿ ಬರುತ್ತವೆ.

ಕೇತಕಿ–ದುಂಬಿಯ ನಂಟನ್ನು ಕುರಿತ ಸುಭಾಷಿತಗಳು ಒಂದೆರಡಿವೆ. ಈ ನಂಟು ನಿತ್ಯಪ್ರೇಮದ ಕುರುಹು; ಆದರೆ ಆ 'ಶನಿ' ಮುಳ್ಳುಗಳು ಭಂಗತರಲೆಳಸುತ್ತವೆ. ನಿತ್ಯಪ್ರೇಮಕ್ಕೆ ಮುಳ್ಳು ಎಲ್ಲಿಯಾದರೂ ತಡೆಯಾಗುವುದುಂಟೆ? (ಶಾರ್ಙ್ಗಧರ ಪದ್ಧತಿ, 1011–3). ಹರಿಹರನು ಹೇಳುವಂತೆ "ಹೊರಗೆ ಮುಳ್ಳೊಳಗೆ ಕಂಪು" ಇದ್ದೇ ಇದೆ, "ಗುಪ್ತಭಕ್ತ"ನಂತೆ.

ಕಡಲ ತೀರದಲ್ಲಿ, ನದಿಯ ಬದಿಯಲ್ಲಿ, ನೀರುಕಾಲುವೆಯ ತಡಿಯಲ್ಲಿ, ಸ್ವಾಭಾವಿಕವಾಗಿ ಬೆಳೆಯುವ ಪೊದರು ಗಿಡ ಇದು. ಎಲೆಗರಿಯ ತಲೆಗೆದರಿ ಗಾಳಿಯಲ್ಲಿ ತೂರಾಡುತ್ತದೆ. ತಮಿಳು ಕವಿಗಳು ಹೇಳುವಂತೆ ಹೊರನೋಟಕ್ಕೆ ಕಾಂಡ ಕಚ್ಚುಕಚ್ಚು–ಸೀಗಡಿ ಪ್ರಾಣಿಯ ಬೆನ್ನಿನಂತೆ (ನಱ್ಱಿಣೈ, 299). ರಾಕ್ಷಸನ ಕೆದರಿದ ತಲೆಗೂದಲಿನಂತೆ ಪತ್ರಸಂಚಯ (ಅಕನಾನೂಱು, 130). ಎಲೆಯಂಚಿನ ಮುಳ್ಳು ಸಾಲು ಷಾರ್ಕ್ ಮೀನಿನ ಹಲ್ಲಿನಂತೆ; ಮೊಗ್ಗು ಆನೆಯ ದಂತದಂತೆ (ನಱ್ಱಿಣೈ, 299). ವರಾಹ–ವಿಷ್ಣುವಿನ ಕೋರೆ ಹಲ್ಲನ್ನು ಮೊಗ್ಗಿಗೆ ಹೋಲಿಸುವುದೂ ಕಾವ್ಯ ಧರ್ಮವೇ ಆಗಿದೆ. "ಕೇದಿಗೆಯ ಬನಗಳಲ್ಲಿ ಸಂಚರಿಸದಿರು ಚೆಲುವೆ, ಸರ್ಪಮಂದಿರವಂತೆ ಕಂಪಿನೊಡಲು" ಎಂದು ಎಚ್ಚರಿಕೆ ಕೊಟ್ಟ ಶ್ರೀ ನರಸಿಂಹಸ್ವಾಮಿಯವರ ಮಾತೂ ಕವಿಸಮಯವೇ.

ಹಳೆಯ ಸಂಸ್ಕೃತ ಪಂಡಿತರು "ಕೇತಕೀದ್ವಯ" ಎಂದಿದ್ದಾರೆ,–ಗಂಡು ಹೂ ಬಿಡುವ ಕೇತಕಿ ಬೇರೆ, ಹೆಣ್ಣು ಹೂ ಬಿಡುವ ಕೇತಕಿ ಬೇರೆ ಎಂಬುದನ್ನು ತಿಳಿಸುವುದಕ್ಕಾಗಿ. ಸಸ್ಯಗಳಲ್ಲಿ ಲಿಂಗಭೇದವಿದೆಯೆಂಬುದು –ಪಾಶ್ಚಾತ್ಯರಿಗೆ ತಿಳಿಯುವುದಕ್ಕೆ ಮೊದಲೇ–ನಮ್ಮ ಪೂರ್ವಿಕರಿಗೆ ತಿಳಿದಿತ್ತು. ವಾಸನೆ ಹೊಮ್ಮುವುದು ಗಂಡು ಹೂವಿನಿಂದ ಮಾತ್ರ ಎಂಬದೂ ಅವರಿಗೆ ತಿಳಿದದ್ದೇ (ಜಾತಕಗಳು, ಬುದ್ಧವಂಶ).

ಕೇತಕಿಯ 'ಹೂ' ಎಂದು ನಾವು ಸಾಮಾನ್ಯವಾಗಿ ಕರೆಯುವ ವಸ್ತು ನಿಜಕ್ಕೂ ಹೂ ಅಲ್ಲ. ಅದು ಬಹು ಸಣ್ಣ ಸಣ್ಣ ಅಸಂಖ್ಯಾತ ಗಂಡುಹೂಗಳನ್ನೊಳಗೊಂಡ ಗುಚ್ಛ. ಕೇದಿಗೆಯ 'ದಳ' ಅಥವಾ ಎಸಳು' ಎಂದು ನಾವು ಕರೆಯುವ ವಸ್ತು ಹೂವಿನ ಭಾಗವೇ ಅಲ್ಲ; ಗಂಡು ಹೂ ಗೊಂಚಲುಗಳನ್ನು ಆವರಿಸಿಕೊಂಡಿರುವ ಮುಚ್ಚೆಲೆ (bract) ಅದು. ಹೆಣ್ಣುಹೂಗಳೂ ಒತ್ತಾದ ಗುಚ್ಛದಲ್ಲಿ ಇರುತ್ತವೆ; ಒಂದು ಹೂವಿನಿಂದ ಇನ್ನೊಂದನ್ನು ಬೇರ್ಪಡಿಸುವುದು ಕಷ್ಟ. ಹಣ್ಣಾದಾಗ ಅನನಾಸ್ ಹಣ್ಣಿನಂತಿರುತ್ತದೆ.

ಕೇದಿಗೆಗೆ 'ತಾಳೆ' ಎಂಬ ಪರ್ಯಾಯ ಪದ ಹೇಗೆ ಹುಟ್ಟಿಕೊಂಡಿತೋ? ತಾಳ, ತಾಲ, ತಾಡ ಮೊದಲಾದ ಪದಗಳು ತೆಂಗಿನ ಜಾತಿಗೆ ಸೇರಿದ ಮರವೊಂದಕ್ಕೆ ಬಹುಕಾಲದಿಂದ ಭಾರತೀಯ ಭಾಷೆಗಳಲ್ಲಿ ಪ್ರಯೋಗವಾಗಿದೆ. ಈ ಮರದ ಎಲೆಗಳೇ (ಓಲೆ) ದಕ್ಷಿಣ ಭಾರತದಲ್ಲಿ ಪ್ರಾಚೀನ ಕಾಲದ ಬರಹ ಸಾಮಗ್ರಿಯಾಗಿತ್ತು. 'ತಾಳೆಯೋಲೆ' 'ತಾಳೆಯ ಕೊಡೆ' ಮುಂತಾದ ಪದಗಳು ಅನ್ವಯವಾಗುವುದು ಈ ಸಸ್ಯ ವಿಶೇಷದಿಂದ ಉತ್ಪನ್ನವಾದ ವಸ್ತುಗಳಿಗೆ. ಕೇದಿಗೆಯು ಬರಹದ ಸಾಮಗ್ರಿಯನ್ನು ಒದಗಿಸದು; ಕೊಡೆಗೂ ಉಪಯೋಗವಾಗದು. ಸುಲಭವಾಗಿ ಒಡೆದು ಸೀಳುವಂಥ ಸ್ವಭಾವಗೊಂಡದ್ದು.

**ಕಂಚವಾಳ** (*Bauhinia Purpurea* L.)

ಪರ್ಯಾಯ ಪದಗಳು:

ಕನ್ನಡ: ಕಂಚುವಾಳ, ಕಾಂಚವಾಳ, ಕಾಂಚಾಳ, ಬಸವನ ಪಾದ

**ಕಮಲ** (*Nelumbium Speciosum* Willd)

ಪರ್ಯಾಯ ಪದಗಳು:

ಕನ್ನಡ: ತಾವರೆ

ನಾಮಲಿಂಗಾನುಶಾಸನದಲ್ಲಿ ಈ ಹೂವಿಗೆ ಸುಮಾರು 40 ಸಂಸ್ಕೃತ ಪರ್ಯಾಯ ಪದಗಳನ್ನು ಹೇಳಿದೆಯಾದರೂ, ಕಮಲಕ್ಕೂ ನೆಯ್ದಿಲೆಗೂ ಯಾವಯಾವ ಪದಗಳು ಅನ್ವಯಿಸುತ್ತವೆಯೆಂದು ಖಚಿತವಾಗಿ ಹೇಳುವುದು ಕಷ್ಟ. ಈ ಪಟ್ಟಿಯ ಜತೆಗೆ ಕನ್ನಡದ ಪರ್ಯಾಯ ಪದಗಳನ್ನೂ ಸೇರಿಸಿ ಕೊಂಡರೆ ಕಷ್ಟದೊಂದಿಗೆ ಅದಲು ಬದಲಿನ ಅವಾಂತರವೂ ತಲೆಹಾಕುತ್ತದೆ. ಈ ಸ್ಥಿತಿ ಏರ್ಪಟ್ಟಿರುವುದು ಇಂದಲ್ಲ, ನಿನ್ನೆಯಲ್ಲ; ತಲೆತಲಾಂತರದಿಂದ ಕವಿಗಳ ತಲೆಯೊಳಗೂ ಕಾವ್ಯವನ್ನು ಓದಿದವರ ತಲೆಯೊಳಗೂ ಭ್ರಮಣೆಯೊಡ್ಡಿರುವ ಸಮಸ್ಯೆ ಇದು.

ಬಲಿತ ಎಲೆಗಳ ಕಾಂಡದ ಸ್ವಲ್ಪ ಭಾಗ ನೀರಿನಮಟ್ಟದಿಂದ ಮೇಲೆದ್ದಿರುತ್ತದೆ. ದಿಂಬಿನಂತಿರುವ ಪುಷ್ಪಪಾತ್ರದ ಮೇಲೆ ಸಣ್ಣ ಸಣ್ಣ ಕುಳಿಗಳಲ್ಲಿ ಒಂದೇ ಒಂದು ಬೀಜವನ್ನೊಳಗೊಂಡ ಅಂಡಾಶಯಗಳು ಬಿಡಿ ಬಿಡಿಯಾಗಿ ಸ್ಥಾಪಿತವಾಗಿರುತ್ತವೆ. ದಳಗಳ ಬಣ್ಣ ಕೆಂಪು, ಊದಾ, ಬಿಳುಪು. ಹೀಗಾಗಿ ಕೆಂದಾವರೆ, ಬೆಳ್ದಾವರೆ, ಇತ್ಯಾದಿ ವಿಶೇಷಣಗಳು.

ಈ ಹೂವೇ ಸಹಸ್ರದಲಪದ್ಮ, ಪಂಕೇರುಹ, ರಾಜೀವ ಇತ್ಯಾದಿ ಪರ್ಯಾಯ ಪದಗಳನ್ನು ಕೊಂಡದ್ದು ಎಂದು ನನಗನ್ನಿಸುತ್ತದೆ. 'ತಾವರೆ ಅಕ್ಕಿ' ಎನ್ನುವುದು ಇದರ ಬೀಜವನ್ನೇ. "ರವಿ ಬರೆ ವನಜವರಳಿತು" (ಗದುಗಿನ ಭಾರತ) ಎನ್ನಿಸಿಕೊಂಡದ್ದೂ ಇದೇ ಹೂ. ಕೆಂದಾವರೆಯನ್ನು ಭುಗಿಲೆಂದು ಉರಿಯುವ ಜ್ವಾಲೆಗೆ ಒಪ್ಪವಿಟ್ಟರು, ತಮಿಳು ಕವಿಗಳು (ಅಕನಾನೂಱು, 106); ಅದರ ಎಸಳು ಮೊಲದ ಕಿವಿಯಂತಿದೆ ಎಂದರು (ಪೆರುಂಪಾಣಾಱುಪ್ಪಟೈ, 114). ಹೂವಿನ ಕಾಂಡದ ಮೇಲೆ ಮುಳ್ಳೆದ್ದಿರು ವುದನ್ನೂ ಅವರು ಗಮನಿಸಿದ್ದರು (ಮತುರೈಕ್ಕಾಂಜಿ, 249). ಎಮ್ಮೆಯೊಂದು ಕೆಸರಿನಲ್ಲಿಳಿದು ತಾವರೆ ಹೂವನ್ನು ತಿಂದು ತೃಪ್ತವಾಗಿ ಹಲಸಿನಮರದ ನೆಳಲಲ್ಲಿ ವಿಶ್ರಮಿಸಿಕೊಂಡ ಗ್ರಾಮಕದೃಶ್ಯವನ್ನು ಕಂಡಿ ದ್ದವರು ಅವರು (ಅಕನಾನೂಱು, 91). ಎಳಗೂಸಿನ ಕೈ ಕಮಲದ ಒಳ ಪದರಗಳ ಎಸಳಿನಂತಿದೆ ಎಂದರು (ಅಕನಾನೂಱು, 16).

ಕ್ರಿಸ್ತಶಕದ ಆದಿಭಾಗದಿಂದಲೇ ತಾವರೆಗೆ ವಿಶೇಷ ಪ್ರಾಶಸ್ತ್ಯ ದೊರಕಿದೆ. ಶಿಲ್ಪಿಗಳು ಇದರ ನಮೂನೆಯನ್ನು ಕಲ್ಲಿನಲ್ಲಿ ಕೊರೆದರು; ಚಿನಿವಾರರು ಬುದ್ಧನ ಪೂಜೆಗಾಗಿ ಚಿನ್ನದಲ್ಲಿ ಎರಕ ಹೊಯ್ದರು. ಮಧ್ಯಯುಗೀನ ದೇವಾಧಿದೇವತೆಗಳಿಗೆಲ್ಲ ತಾವರೆ ಹೂ ಪೀಠವಾಯಿತು. ಬ್ರಹ್ಮ ಹುಟ್ಟಿದ್ದೇ ವಿಷ್ಣುವಿನ ನಾಭಿಕಮಲದಲ್ಲಲ್ಲವೆ? ಲಕ್ಷ್ಮಿ-ಸರಸ್ವತಿಯರಂತೂ ಪದ್ಮಪೀಠವನ್ನು ಬಿಟ್ಟು ಇಳಿದದ್ದೇ ಇಲ್ಲ. ಮಾನವರಾಗಿ ಹುಟ್ಟಿ ಬೆಳೆದು ದೈವತ್ವವನ್ನು ಸಂಪಾದಿಸಿಕೊಂಡವರ ಪ್ರತಿಮೆಗಳಿಗೆ ಕೂಡ ಪದ್ಮ ಪೀಠವೇ ಬೇಕಾಯಿತು. ತಾವರೆಯ ನಕಾಸೆ ನಮ್ಮ ಉಡುಗೆ ತೊಡುಗೆ ಆಭರಣ ಅಲಂಕಾರಗಳಿಗೂ ಆಕರವಾಯಿತು; ಇಂದಿಗೂ ಆಗಿದೆ.

ದೇವನ ಪಾದಯುಗ್ಮಗಳು ಪದ್ಮ ಪಲ್ಲವವಾಯಿತು; ಭಕ್ತನು ಆ ಹೂವಿನ ಪರಾಗವನ್ನು ಭುಜಿ ಸುವ ದುಂಬಿಯಾದ. ಹೂವಿನ ಎಳಸು ಚೆಲುವಾದ ಕಣ್ಣಿಗೆ ಹೋಲಿಕೆಯಾಯಿತು. ಸುಂದರವಾದ ಬೆರಳು ಗಳಿಗೆ ಸಂಕೇತವಾಯಿತು. ಯೋಗಿಗೆ ದೇಹದ ನಾನಾ ಕುಂಡಲಿಗಳು ಪದ್ಮಗಳಂತೆ ಕಂಡವು. ಜನಸಾಮಾನ್ಯದ ದೃಷ್ಟಿಯಲ್ಲಿ ಪೂಜಾಯಜ್ಞಕ್ಕೆ ಶ್ರೇಷ್ಠವಾದೊಂದು ಹೂವಾಯಿತು.

ಮಧ್ಯಕಾಲದ ದಕ್ಷಿಣಭಾರತದಲ್ಲಿ ತಾವರೆ ಹೂವಿನ ಬಳಕೆ ದೇವಾಲಯಗಳಲ್ಲಿ ಅಧಿಕವಾಗಿತ್ತು. ಇದರ ಬೆಳೆಗಾಗಿಯೇ ಪ್ರತ್ಯೇಕವಾದ ದತ್ತಿಗಳನ್ನು ಬಿಟ್ಟಿದ್ದ ಸಂಗತಿ ಅನೇಕ ಶಾಸನಗಳಿಂದ ತಿಳಿದು ಬರು ತ್ತದೆ. ಮಾಣಂಬಾಡಿಯ ನಾಗನಾಥಸ್ವಾಮಿ ದೇವಾಲಯಕ್ಕೆ ಪ್ರತಿದಿನವೂ 2000ಹೂಗಳನ್ನು ಸರಬ ರಾಜು ಮಾಡಬೇಕಾಗಿತ್ತು (95-1931/2)

ವುದಾದರೆ ತಿಳಿಯಾದ ಊದಾ ( light violet ) ಎನ್ನಬಹುದು. ಈ ಒಂದು ಗುಣವನ್ನು ಬಿಟ್ಟರೆ ಬಿಳಿಯ ಎಕ್ಕಕ್ಕಿಂತ ಬೇರಾವ ಗುಣದಲ್ಲಿಯೂ ವ್ಯತ್ಯಾಸವಿಲ್ಲ. ಈ ಪ್ರಭೇದ ಬೆಳೆಯುವುದೂ ಬಿಳಿಎಕ್ಕದ ಆಕ್ಕಪಕ್ಕಗಳಲ್ಲಿಯೇ; ಇದರ ಬೇರುಗಂಟೂ ಕೆಲವು ಸಲ ಗಣಪನನ್ನು ಹೋಲುವುದಾದರೂ 'ಕೆಂಪು ಎಕ್ಕ' ಗೌಣವೇ. ಸಸ್ಯ ಶಾಸ್ತ್ರವು ಈ ಪ್ರಭೇದಗಳನ್ನು ಒಪ್ಪುವುದಿಲ್ಲ.

ಎಕ್ಕಕ್ಕೂ ಅರ್ಕಕ್ಕೂ ಭಾಷಾ ಸಾಮ್ಯವಿದೆ– ತತ್ಸಮ ತದ್ಭವಗಳ ನಂಟು. ಅರ್ಕಕ್ಕೂ ಸೂರ್ಯನಿಗೂ ಬಿಗುವಾದ ಗಂಟು. ಅರ್ಕವೇ ಸೂರ್ಯನೆಂಬ ಭಾವನೆ ವೇದಕಾಲದ್ದು. ಜನನೇಂದ್ರಿಯದ ಬಲವೃದ್ಧಿಗೆ ಎಕ್ಕದ ಕಡ್ಡಿಯಿಂದ ತಯಾರಾದ ರಕ್ಷೆಯ ಬಳಕೆ ಅಥರ್ವವೇದದಲ್ಲಿ ಉಕ್ತವಾಗಿದೆ. ಜಾನಪದ ಜೀವನದಲ್ಲಿ ಮದುವೆ ಗರ್ಭಾಧಾನ ಸಂದರ್ಭಗಳಲ್ಲಿ ಇದೇ ಸಂಪ್ರದಾಯವನ್ನು ಬಿಂಬಿಸುವ 'ಸಾಂಗ್ಯ'ಗಳು ಇಂದಿಗೂ ಪ್ರಚಾರದಲ್ಲಿವೆ.

## ಕಕ್ಕೆ (*Cassia Fistula* L.)

ಪರ್ಯಾಯ ಪದಗಳು–

ಕನ್ನಡ:ಕೊಂದೆ, ಆರಗು, ಕಾಕಿ

ಸಂಸ್ಕೃತ: ಸುವರ್ಣಕ, ಕಾಂಚನ, ಅಂತ್ರದ್ರು

ದಕ್ಷಿಣ ಭಾರತದ ಮೈದಾನ ಕಾಡುಗಳಲ್ಲಿ 30–40 ಅಡಿ ಎತ್ತರ ಬೆಳೆಯುವ ಮರ. "ಅಡಿಯಿಂದ ತುದಿವರೆಗು ಎಲೆಯೆ ಕಾಣಿಸದಂತೆ ಕಿಕ್ಕಿರಿದು" (ವಿ.ಸೀ.) ಹೂತಳೆವ ಕಕ್ಕೆ. (ಎಲೆಗಳು ಉದುರಿದ ಮೇಲೆಯೇ ಮರ ಹೂ ತಳೆಯುತ್ತದೆಯಾದ್ದರಿಂದ ಎಲೆ 'ಕಾಣಿಸದೆ' ಇರುತ್ತದೆ, ಅಷ್ಟೆ!) ಅಪರಂಜಿ ಚಿನ್ನದ ಬಣ್ಣ ಹೂವಿನದು. ಹಳೆಯ ತಮಿಳು ಕವಿಗಳಿಗೆ ಪರಿಚಿತವಾಗಿದ್ದ ದೃಶ್ಯ ಇದು. ಉದುರಿದ ಹೂಗಳು ಹಳ್ಳವೊಂದರಲ್ಲಿ ಬಿದ್ದಾಗ ಚಿನ್ನದ ನಾಣ್ಯಗಳು ತುಂಬಿದ ಪೆಟ್ಟಿಗೆಯ ಬಾಗಿಲು ತೆರೆದಿಟ್ಟಂತೆ ಕಂಡಿತು (ಕುರುಂತೊಕೈ, 233). ಹೂಗಳು ಪುಷ್ಪಗುಚ್ಛದ ಕಾಂಡದ ಮೇಲೆ ಪೋಣಿಸಿದಂತೆ ಅಣಿಯಾಗಿ ರೆಂಬೆಕೊಂಬೆಗಳಿಂದ ಬಿಳಿಲುಗಳಂತೆ ತೊಂಗುತ್ತವೆ; ಈ ನೋಟವನ್ನು 'ಚಿನ್ನದ ಆಭರಣಗಳಿಂದ ಅಲಂಕೃತಗೊಂಡ ಮರ' ಎಂದರು (ಅಕನಾನೂಱು, 364), ಅಥವಾ 'ಕೊನ್ರೈಮರ ಮಾಲೆಗಳನ್ನು ತಳೆಯಿತು'- ಬಿಡಿ ಹೂಗಳನ್ನಲ್ಲ ಎಂದು ಧ್ವನಿ– ಎಂದಿದ್ದಾರೆ (ಐಂಕುರುನೂಱು, 497)

ಕಕ್ಕೆ ಕಾಯಿ ಒಂದೆರಡಡಿ ಉದ್ದದ ಕರಿಯ ಕೋಲಿನಂತೆ ತೊಂಗಿರುತ್ತದೆ. 'ತೆಂಕಣಗಾಳಿ ಸೋಂಕಿದೊಡಂ......' ನಮ್ಮ ಪಂಪನಿಗೆ ಏನೇನೋ ಆಯಿತಲ್ಲವೆ? ಹಾಗೆಯೇ ತಮಿಳು ಕವಿಯೊಬ್ಬನಿಗೆ ಇದೇ ತೆಂಕಣ ಗಾಳಿಯ ಬಿರುಬಿನಲ್ಲಿ ಜೋಲಾಡುತ್ತಿದ್ದ ಕಕ್ಕೆ ಕಾಯಿಗಳು ಪಕ್ಕದಲ್ಲಿದ್ದ ಹಿರಿಯ ಬಂಡೆಯ ಮೇಲೆ ಮದ್ದಳೆ ನುಡಿಸಿದ ಭಾಸವಾಯಿತು. (ನಱ್ಱಿಣೈ, 46). ಕಕ್ಕೆಕಾಯಿ ಬಲಿತು ಹಣ್ಣಾದಾಗ ಅದರ ತಿರುಳು ನಾಲಗೆಗೇನೋ ಸ್ವಲ್ಪ ಸಿಹಿಯಾಗಿ ಒಂದು ಬಗೆಯ ರುಚಿಯಾಗಿ ಇರುತ್ತದೆ; ಆದರೆ ವಿರೇಚಕ ಗುಣ. ಕಕ್ಕೆ ಹಣ್ಣು ತಿಂದ ನರಿಯ ಕತೆ ಬಹುಮಂದಿಗೆ ಗೊತ್ತಿರುವ ಸಂಗತಿಯೇ.

ಕಕ್ಕೆಯ ಚೌಬೀನೆ ಅಷ್ಟೇನೂ ಉಪಯೋಗಕ್ಕೆ ಬಾರದು. ಸೌದೆಯಾಗಿಯೇ ಇದರ ಹೆಚ್ಚು ಉಪಯೋಗ. ತೂಕದ ಚೌಬೀನೆಯಾದದ್ದರಿಂದ ಒರಟು ಕಂಬಗಳಿಗೂ ಒನಕೆಗಳಿಗೂ ಒದಗಿಬರುತ್ತದೆ.

'ಅರುವತ್ತುಮೂರು ಪುರಾತನ'ರಲ್ಲೊಬ್ಬನಾದ ಚಂಡೇಶ ಪಿಳ್ಳೆಯು "ಕಕ್ಕೆ ಎಕ್ಕೆಗಳ ಪೂವಂ ತಂದು" ಶಿವಲಿಂಗಕ್ಕೆ ತಣಿವಿಲ್ಲದೆ ಪೂಜೆಮಾಡಿದನೆಂದು ಹರಿಹರನ ರಗಳೆಯಿಂದಲೇ ತಿಳಿಯುತ್ತದೆ. ಕತೆಯ ಕೊನೆಗೆ ಶಿವನು ಪ್ರತ್ಯಕ್ಷನಾಗಿ "ಆನುಂಡ ಶೇಷಪ್ರಸಾದವದು ನಿನಗೆಂದು ಚಂಡೇಶ ಪಿಳ್ಳೆಯಗೊಲ್ದು ಬೀಳುಡೆಯಿತ್ತು ಕೊಂಡಾಡಿ ಮುಂಡಾಡಿ ಬಾಯ ತಂಬುಲವಿತ್ತು...ನೆಗೆದನಾಕಾಶಕ್ಕೆ". ಶೇಕ್ಕಿಳಾರನ (ಪೆರಿಯ ಪುರಾಣಂ) ಕತೆಯ ಮುಕ್ತಾಯ ಹೀಗಿಲ್ಲ. ಶಿವನು ಚಂಡೇಶನಿಗೆ 'ಸುರಕೊನ್ರೈ'(=ಕಕ್ಕೆ) ಹೂವಿನ ಹಾರವನ್ನು ಮುಡಿಸಿ ಆಶೀರ್ವಾದ ಮಾಡಿದನಂತೆ. ಇದೇ ಸಂದರ್ಭವನ್ನು ತಮಿಳು ನಾಡಿನ ಶಿಲ್ಪಿಗಳು ಉಪಯೋಗಿಸಿಕೊಂಡಿದ್ದಾರೆ. ಹೀಗೆ ಶಿವನಿಗೆ ಕಕ್ಕೆ ಹೂ ಪ್ರಿಯವಾದದ್ದು ಮಾತ್ರವಲ್ಲ, ತನ್ನ ಭಕ್ತನಿಗೆ ಅನುಗ್ರಹ ಮಾಡಿದ ಪ್ರಸಾದವೂ ಆಗಿದೆ. ಪುರನಾನೂಱಿನ ಪದ್ಯವೊಂದು ಈ ಹೂವನ್ನು ಶಿವನ ಚಿಹ್ನೆಯೆಂದೇ ಕರೆದಿದೆ.

ದಕ್ಷಿಣ ಭಾರತದ ಮೈದಾನ ಪ್ರದೇಶವಲ್ಲಿ ಇದರ ಹರವು. ಕಲ್ಲುಭೂಮಿಯನ್ನು ಆಶ್ರಯಿಸುವ ಜಾಡು. ಕಾಂಡದ ರೂಪ ಚಚ್ಚೌಕ (ಅಡ್ಡವಾಗಿ ಕತ್ತರಿಸಿದಾಗ). ನೀಳವಾದ ಹೂ ತೆನೆ. ವಾಸನೆ ಇಂಗಿರುವುದು ಎಲೆಗಳಲ್ಲಿ. ಒಂದು ವಿಧವಾದ ಕರ್ಪೂರವಾಸನೆಯಿರುವುದರಿಂದ ಕರ್ಪೂರಬಳ್ಳಿ ಎಂಬ ಹೆಸರು. ಆದರೆ ಇದು ಬಳ್ಳಿಯಾಗಿ ಹಬ್ಬುವಂಥ ಗಿಡವಲ್ಲ. ಪೊದರುಗಿಡ, ಮೂರುನಾಲ್ಕಡಿ ಎತ್ತರ, ಹರಡುವುದೂ ಉಂಟು.

ನಮ್ಮ ಕವಿಗಳಿಗೆ ಯಾವುಯಾವುದೋ ಗಿಡಗಳನ್ನೆಲ್ಲ ಬಳ್ಳಿ ಲತೆ ಎಂದು ವಿಶೇಷಿಸುವುದರಲ್ಲಿ ಏನೋ ಆಸಕ್ತಿ. ಸೋಮವನ್ನೂ ಲತೆ ಎಂದು ಬಿಟ್ಟರು. ಲವಂಗವನ್ನೂ ಲತೆ ಎಂದು ಬಿಟ್ಟರು! ಮೊದಲನೆಯದು ಪೊದರು, ಎರಡನೆಯದು ಎತ್ತರವಾಗಿ ಬೆಳೆಯುವ ಮರ. ಎಳೆಯ ರೆಂಬೆಕೊಂಬೆಗಳು ತೆಳುವಾಗಿದ್ದು ಗಾಳಿಯಲ್ಲಿ ಬಳುಕಾಡುವುದರಿಂದಲೋ, ಲತೆ ಅಥವಾ ಬಳ್ಳಿ (ವಳ್ಳಿ) ಎಂಬ ಪದಗಳು ಮರಗಿಡ ಎನ್ನುವುದಕ್ಕಿಂತಲೂ ಕಾವ್ಯನಯವನ್ನು ಹೊಂದಿದ್ದು ಎಂಬ ನಂಬಿಕೆಯಿಂದಲೋ, ಅನೇಕ ಗಿಡಮರಗಳನ್ನು ಲತಾ ಎಂದೇ ನಿರ್ದೇಶಿಸಿ ಬಿಟ್ಟಿದ್ದಾರೆ! ಅಂಥ ಗಿಡಗಳ ಅನನ್ಯತೆಯನ್ನು ಕಂಡು ಹಿಡಿಯುವ ಸನ್ನಾಹದಲ್ಲಿರುವ ಸಸ್ಯಶಾಸ್ತ್ರಜ್ಞನು ಅಡ್ಡದಾರಿ ಹಿಡಿಯುವುದಕ್ಕೆ ಒತ್ತಾಸೆ ಕೊಟ್ಟಿದ್ದಾರೆ!

## ನೆಯ್ದಿಲೆ (*Nymphaea Stellata* Willd.)

(ತಾವರೆಗೆ ಕೊಟ್ಟಿರುವ ಟಿಪ್ಪಣಿಯನ್ನೂ ನೋಡಿ). ನೆಯ್ದಿಲೆಯ ಎಲೆಗಳು ನೀರಿನ ಮಟ್ಟದಲ್ಲಿ ಮಲಗಿರುತ್ತವೆ. ಹೂವಿನ ರಚನೆಯೂ ತಾವರೆಯಿಂದ ಭಿನ್ನವಾದದ್ದು. ಇರುವ ಒಂದು ಅಂಡಕೋಶವು ಪುಷ್ಪಪಾತ್ರದಲ್ಲಿ ಮುಳುಗಿರುತ್ತದೆ; ಬೀಜಗಳು ಅಧಿಕಸಂಖ್ಯೆಯಲ್ಲಿರುತ್ತವೆ. ಸಸ್ಯಶಾಸ್ತ್ರರೀತಿಗನುಸಾರವಾಗಿ ಎರಡು ಸ್ಪೀಷೀಸುಗಳು ದಕ್ಷಿಣ ಭಾರತದಲ್ಲಿ ಬೆಳೆಯುತ್ತವೆ. 'ನಿಂಫಿಯ ಸ್ಟೆಲ್ಲೇಟ' ಎಂಬುದೇ ನಿಜವಾದ ನೀಲೋತ್ಪಲ; 'ನಿಂಫಿಯ ಪ್ಯೂಬಿಸೆನ್ಸ್' ಎಂಬ ಜಾತಿಯ ಹೂಗಳು ಬಿಳಿ, ನೀಲಿ ಅಥವಾ ಊದಾ ಬಣ್ಣವನ್ನು ಕೊಂಡಿರುತ್ತವೆ–ಹೀಗಾಗಿ ಕನ್ನೈದಿಲು, ಚೆನ್ನೈದಿಲು ಇತ್ಯಾದಿ.
ಪರ್ಯಾಯ ಪದಗಳು–

ಕುವಲಯ, ಕುಮುದ, ಉತ್ಪಲ, ಇತ್ಯಾದಿ.

"ರವಿ ಬರೆ... ಕುಮುದ ಮುಚ್ಚಿತು" (ಗದುಗಿನ ಭಾರತ) ಎಂದು ನಿರ್ದೇಶಿತವಾಗಿರುವ ಹೂ ಇದೇ. "ಉನ್ನತಮಾಗಿರೆ ಸೊಕ್ಕಿ।ದುರ್ನ್ನತ ಕುಚೆಯರ ವಿಲೋಚನಾರುಣರುಚಿಯಂ। ತನ್ನೆಸಳ್ಗಳಿನನು ಕರಿಸುವ। ಚೆನ್ನೈದಿಲ ಕಂಪನೆಯ್ದಿಲಾರ್ಪುವೆ ಪೂಗಳ್" ಎಂದು ಪಂಪನಿಂದ ಶಹಬಾಸ್ ಪಡೆದ ಹೂ ಇದೇ.

ಈ ಹೂವನ್ನು ಶಿವನಿಗೆ ಅರ್ಪಿಸಲು ಹರಿಹರ ಲಂಚ ಕೇಳಿದನಂತೆ–"ಒಯ್ದೊಡೇನಂ ಲಂಚವೀವೆ?"

## ಪಡ್ಡಳಿ, ಚೆಂಗಣಿಗಿಲೆ (*? Nerium indicum* Wall.)

ಪರ್ಯಾಯ ಪಗಳು

ಕನ್ನಡ: ಕೆಂಪುಗಣಗಿಲೆ, ಕೆಂಪು ಕಣಗಿಲು, ಕಣಲಿಗೆ
ಸಂಸ್ಕೃತ: ಕರವೀರ

ಕೆಲವು ನಿಘಂಟುಗಳಲ್ಲಿ ಈ ಎರಡು ಪದಗಳನ್ನೂ ನೀರಿಯಮ್ ಇಂಡಿಕಮ್ ಎಂಬ ಗಿಡದೊಂದಿಗೆ ಹೊಂದಿಸಿದ್ದಾರೆ. ಈ ಸಂದರ್ಭದಲ್ಲಿ ಎರಡು ಮುಖ್ಯ ಪ್ರಶ್ನೆಗಳೇಳುತ್ತವೆ (1) ಎರಡು ಹೆಸರುಗಳೂ ಒಂದೇ ಗಿಡವನ್ನು ನಿರ್ದೇಶಿಸುತ್ತವೆಯೆ? (2) ಇವನ್ನು 'ನೀರಿಯಮ್ ಇಂಡಿಕ'ದೊಡನೆ ಅನನ್ಯಪಡಿಸುವುದು ಸಾಧುವೆ?

ಮೊದಲನೆಯ ಪ್ರಶ್ನೆಗೆ ಊಹೆಯ ಮರು ಪ್ರಶ್ನೆಯನ್ನು ಕೇಳಬೇಕಾಗಿದೆ. ನೀರಿಯಮ್‌ನಲ್ಲಿ ಎರಡು ಬಗೆ ಇವೆ: ಬಿಳಿಹೂ, ಕೆಂಪು ಹೂ. ಪಡ್ಡಳಿ (ಚೆಂ)ಗಣಿಗಿಲೆಗಳು ಕ್ರಮವಾಗಿ ಇವನ್ನು ಸೂಚಿಸುತ್ತವೆಯೆ?

ಗುಣಗಳನ್ನು ಹೇಳುತ್ತಾರೆ. ಮೈಗೆ ಒಳ್ಳೆಯದು ಎಂದುಕೊಂಡು ಕೆಲವೆಡೆಗಳಲ್ಲಿ ಸೊಪ್ಪನ್ನು ತರಕಾರಿಯಂತೆ (ಇತರ ಸೊಪ್ಪುಗಳೊಂದಿಗೆ ಕಲಸಿ) ಬೇಯಿಸಿ ತಿನ್ನುವುದೂ ಉಂಟು.

ಹೂ ಸಣ್ಣದು, ಶುಭ್ರಬಿಳಿ ಬಣ್ಣ. ಗಿಡದಲ್ಲಿ ಅರಳಿದಾಗ ಗಿಡಕ್ಕಾಗಲಿ ತನಗಾಗಲಿ ಅಂದಚಂದಗಳೇನೂ ಉಂಟಾಗವು. ಕವಿಯು ಕಣ್ಣನ್ನೂ ಸೆಳೆದಿಲ್ಲ. ಇನ್ನೇನು ಮೊಗ್ಗು ಅರಳಿ ಹೂವಾಗುತ್ತದೆ ಎನ್ನುವ ಹೊತ್ತಿನಲ್ಲಿ ಅದನ್ನು ಎದುರುಬದಿರಾಗಿ ನೋಡಿದರೆ ಅಧರದ್ವಯವನ್ನು ಹೋಲುತ್ತದೆ. ಸುಂದರವಾದ ತುಟಿಗಳು ಹೀಗಿರಬೇಕು ಎನ್ನುತ್ತವೆ ಶಿಲ್ಪಶಾಸ್ತ್ರ ಸೂತ್ರಗಳು.

'ಪುಟ್ಪವಿದಿ' (ಪುಷ್ಪ ವಿಧಿ) ಎಂಬ ತಮಿಳು ಗ್ರಂಥದಲ್ಲಿ ಶಿವನ ತಲೆ ಮೇಲಿಡಲು ಯೋಗ್ಯವಾದ ಹೂ ತುಂಬೆ ಎಂದು ತಿಳಿಸಲಾಗಿದೆ. ಈ ಗ್ರಂಥ ಹುಟ್ಟಿದ್ದು ಸುಮಾರು 200 ವರ್ಷಗಳ ಹಿಂದೆ. 10ನೇ ಶತಮಾನದಲ್ಲಿ ಬಾಳಿದ ಶೈವ ಭಕ್ತರ 'ತೇವಾರ'ಗಳಿಂದ ಆಕಾಲದಲ್ಲಿಯೇ ತುಂಬೆ ಹೂ ಈಶ್ವರನಿಗೆ ಪ್ರಿಯವಾಗಿತ್ತೆಂದು ತಿಳಿದು ಬರುತ್ತದೆ. ವರ್ಷದ ಸಂಕ್ರಾಂತಿ ದಿನಗಳಲ್ಲಿ ಒಂದು ನಿರ್ದಿಷ್ಟ ಪ್ರಮಾಣದ ತುಂಬೆಹೂ ಶಿವಪೂಜೆಗಾಗಿ ಸಲ್ಲಬೇಕಾಗಿದ್ದ ಸಂಗತಿ ಶಾಸ್ತ್ರೋಕ್ತವಾಗಿದೆ (226, 1921). ಅರ್ಧ ಹಿಡಿ ಹೂಗಳನ್ನು ತಂದು ಒದಗಿಸಿದವನಿಗೆ ಒಂದು 'ಕಾಶು' ಸಂಭಾವನೆ ದೊರಕುತ್ತಿತ್ತು (336, 1927) ಕ್ಷೀರನಾಥೇಶ್ವರನ ದೈನಂದಿನ ಪೂಜೆಗೆ ಒಂದು ನಾಟಿ ತುಂಬೆಹೂ ಬೇಕಾಗಿತ್ತು. (508, 1926)

## ದವನ (*Artemesia Vulgaris* L.)

ಪರ್ಯಾಯ ಪದಗಳು:

ಕನ್ನಡ: ಮಾಚಿಪತ್ರೆ, ಮಾಚಪತ್ರೆ, ಮಂಚಿಪತ್ರೆ

"ದವನವೇ ಶಿವನ ಪರಿಮಳದ ಹಬ್ಬಂ ಬಾರ, ಭುವನದೊಳ್ನಿನಗೆ ಸರಿಯಿಲ್ಲ ಸೌರಭ ಸಾರ" ಎನ್ನುತ್ತಾನೆ ಹರಿಹರ. ಅವನಿಗೆ ಪರಿಚಿತವಾಗಿದ್ದ ದವನ ಇಂದು ಅದೇ ಹೆಸರಿನಿಂದ ನಮಗೆ ತಿಳಿದಿರುವ ದವನವಲ್ಲ. ಇಂದಿನ ದವನ (Artemesia palleus); ನಮ್ಮ ದೇಶಕ್ಕೆ ಕಾಲಿಟ್ಟು ಇನ್ನೂ ನೂರು ವರ್ಷ ಕೂಡ ಕಳೆದಿಲ್ಲ. ಸುಮಾರು ಒಂದಡಿ ಎತ್ತರ ಬೆಳೆಯುವ ಗಿಡ; ಗಿಡದ ಒಡಲೆಲ್ಲ ಸುಗಂಧಮಯ; ಬೂದಿಮಿಶ್ರವಾದ ನೀಲಿ ಎಲೆಗಳು, ಛಿದ್ರಛಿದ್ರವಾದವು.

ಹರಿಹರನೂ ಇತರ ಹಳೆಯ ಕವಿಗಳೂ ಕಂಡಿದ್ದ ದವನ (Artemesia vulgaris) ನಮ್ಮ ದೇಶದ ಸ್ವಾಭಾವಿಕ ಗಿಡಗಳಲ್ಲೊಂದು. ಇಂದು ಮೇಲೆ ಕಾಣಿಸಿರುವ ಪರ್ಯಾಯ ಪದಗಳಿಂದ ಬಳಕೆಗೊಂಡದ್ದು, ಪಶ್ಚಿಮ ಘಟ್ಟಗಳ ತಪ್ಪಲು ಪ್ರದೇಶಗಳಲ್ಲಿ ಆರೇಳಡಿ ಎತ್ತರ ಬೆಳೆಯುತ್ತದೆ. ಎಲೆಗಳು ಹಸುರು ಬಣ್ಣದವು, ಛಿದ್ರವಾದುವಲ್ಲ. ಪರಿಮಳವಿರುವುದು ಎಲೆಯಲ್ಲಿ. ಹೂ ವೈಯಕ್ತಿಕವಾಗಲಿ ತೆನೆಯಲ್ಲಾಗಲಿ ಶೋಭಿಸದು; ಗಾತ್ರವೂ ಇಲ್ಲ, ಹಸುರು ಬಿಟ್ಟು ಬೇರೆ ಬಣ್ಣವೂ ಇಲ್ಲ.

ಮಾಚಿಪತ್ರದ ಬಳಕೆ ದಕ್ಷಿಣ ಭಾರತದ ಶಿವದೇವಾಲಯಗಳಲ್ಲಿ ಹಳೆಯ ಕಾಲದಿಂದಲೂ ಬಂದದ್ದು. ಈ ಗಿಡವನ್ನು ಹೆಸರಿಸುವ ಕೆಲವು ಶಾಸನಗಳಿವೆ. ಅತ್ಯಂತ ಹಳೆಯದು 11ನೆಯ ಶತಮಾನಕ್ಕೆ ಸೇರಿದ್ದು (BKI, I (1) 108, A.D. 1069).

ನಮ್ಮ ಕಾಲದ ಹೂವಾಡಿಗರ ವೃತ್ತಿಗೆ ಮಾಚಿಪತ್ರೆ ಬಹು ಅನುವಾಗಿ ಒದಗಿದೆ. ಹಾರಗಳಲ್ಲಿ ಹೂವಿನ ಪ್ರಮಾಣವನ್ನು ತಗ್ಗಿಸಿ ಸೊಪ್ಪಿನ ಪ್ರಮಾಣವನ್ನು ಹೆಚ್ಚಿಸುವ ಸಾಧನವಾಗಿದೆ.

## ದೊಡ್ಡಪತ್ರೆ (*Anisochilus Carnosus* Wall.)

ಪರ್ಯಾಯ ಪದಗಳು:

ಕನ್ನಡ: ಕರುವೇಲು ಬಳ್ಳಿ, ಕರ್ಪೂರಬಳ್ಳಿ
ಸಂಸ್ಕೃತ: ಇಂದುಪರ್ಣಿ

ನಮ್ಮ ಕಲಾಸಂಸ್ಕೃತಿಯಲ್ಲಿ ಮಾವಿಗೊಂದು ಪ್ರತ್ಯೇಕ ಸ್ಥಾನವಿದೆ. ಎಳೆಮಾಗಾಯಿನ 'ಗಿಣಿ' ರೂಪಕ್ಕೆ ತಮಿಳು ಕವಿಗಳು ಮನಸೋತಿದ್ದರು (ಅಕನಾನೂಱು, 97). ಹಳೆಯ ಕಾಲದ ಶಿಲ್ಪಿಗಳು ಈ ಆಕರವನ್ನು ಬಳಸಿಕೊಂಡು ಬೆಳೆಸಿಕೊಂಡು ವಿಧವಿಧವಾದ ಚಿತ್ತಾರಗಳನ್ನು ಕಲ್ಲಿನಲ್ಲಿ ಬಿಡಿಸಿದರು; ಕುಶಲ ಕಲೆಗಾರರು ಬಗೆ ಬಗೆಯ 'ಬುಟ್ಟಿ' ಪೀತಾಂಬರಗಳನ್ನು ನೇಯ್ದರು. ಬಟ್ಟೆಗಳ ಮೇಲೆ ಈ ನಕಾಸೆ ಬಿದ್ದದ್ದು ಮೊಗಲಾಯಿ ಕಾಲದಲ್ಲಿ. ಮೊಗಲಾಯಿ 'ಬುಟ್ಟಿ'ಗಳು ಇಂದಿಗೂ ಬನಾರಸ್ ರೇಶ್ಮೆಯ ಸೀರೆ ಪೀತಾಂಬರಗಳ 'ಟ್ರೇಡ್ ಮಾರ್ಕ್' ಆಗಿದೆಯಲ್ಲವೆ? ಈಚೀಚೆಗೆ ಕಂಚಿ ಪಟ್ಟು ಸೀರೆಗಳಿಗೂ ಮಾಗಾಯಿ ಅಂಚೂ ಸೆರಗೂ ಕೀರ್ತಿ ತಂದಿವೆ-ಭಾರತದಲ್ಲಿ ಮಾತ್ರವಲ್ಲ, ಹೊರದೇಶಗಳಲ್ಲಿಯೂ! ಒಡವೆಗಳೂ ಅಷೆ-ಮಾಗಾಯಿ ಓಲೆ, ಮಾಗಾಯಿ ಸರ! ಚಿನ್ನದ್ದೂ ಉಂಟು, ಬೆಳ್ಳಿಯದೂ ಉಂಟು, ನವರತ್ನ ಖಚಿತವಾದದ್ದೂ ಉಂಟು!

ಉಶ್! ಮನೆಯ ಹೆಂಗುಸರಾರಾದರೂ ಕಿವಿಗೊಟ್ಟಾರು, ಜೋಕೆ!

**ಜಾತಿ** (*Jasminum grandiflorum* L.)

ಪರ್ಯಾಯ ಪದ:

ಕನ್ನಡ: ಜಾದಿ, ಜಾದಿಗೆ, ಜಾಜಿ

"ಉಣ್ಮುವ ಪೊಸಗಂಪಂ ಪಡೆದು ಪೊಟ್ಟಲೊಲ್ ಜನ" (ಪಂಪ)ವನ್ನು ಸೋಲಿಸುತ್ತದೆಯಂತೆ, ಜಾಜಿ. ಎಂದರೆ, ಇದು ರಾತ್ರಿ ಕಳೆದು ಬೆಳಕು ಹರಿಯುವ ಹೊತ್ತಿಗೆ ಅರಳುವ ಹೂ ಎಂದಾಯಿತು. ಇದರಿಂದ ಹೊಮ್ಮುವುದು "ಅನಂಗಾಮೃತ ಸೌಖ್ಯಸಾರ" (ಪಂಪ). ಹೀಗಾಗಿ ಹರಿಹರನ ಮಾತಿನಲ್ಲಿ "ಜಾತಿ ನೀನೇ ಸಕಲ ಪುಷ್ಪ ಜಾತಿಗೆ ಜಾತಿ" ಎಂದೆನ್ನಿಸಿಕೊಂಡಿದೆ.

ಮಲ್ಲಿಗೆ ಜಾತಿಗಳಲ್ಲಿ ಅನೇಕ ಒಳಪಂಗಡಗಳಿವೆ. ಶಾಸ್ತ್ರದೃಷ್ಟಿಯಿಂದಾದ ವಿಂಗಡಗಳು ಬೇರೆ ಬೇರೆ ಸ್ಪೀಷೀಸಿಗೋ, ಬೇರೆ ಬೇರೆ ವೆರೈಟಿಗೋ ಸೇರಿದವು; ಖಚಿತವಾದ ಚೌಕಟ್ಟಿನೊಳಗೆ ಸೇರುವಂಥವು. ಸಾಮಾನ್ಯ ದೃಷ್ಟಿಯಿಂದಾದ ವಿಂಗಡಗಳಿಗೆ ಇಂಥ ಪರಿಮಿತಿಯಿಲ್ಲ; ಒಂದರೊಡನೊಂದು ಕಲೆತು ಅದಲು ಬದಲು ಭ್ರಮೆಯನ್ನು ಹುಟ್ಟುವಂಥವು. ಒಂದು ಕಡೆ ಮೊಲ್ಲೆಯಾದದ್ದು ಇನ್ನೊಂದು ಕಡೆ ಮಲ್ಲಿ; ಮಲ್ಲಿಯಾದದ್ದು ಇರುವಂತಿಗೆ; ಇರುವಂತಿಗೆಯಾದದ್ದು ಜಾತಿಮಲ್ಲಿ, ಹೀಗೆ ಒಂದೇ ರಚುಮು ಕರ್ನಾಟಕದ ಬೇರೆ ಬೇರೆ ಪ್ರದೇಶಗಳ ಆಡುಮಾತಿನಲ್ಲಿ ಸಿಕ್ಕಿಕೊಂಡು ಗೊಂದಲಕ್ಕೆ ಎಡೆಗೊಟ್ಟಿದೆ.

ಜಾಜಿ ಒಂದು ಬಳ್ಳಿ. ದಕ್ಷಿಣ ಭಾರತದ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತದೆ. ತೋಟಗಳಲ್ಲಿಯೂ ಮನೆಗಳಲ್ಲಿಯೂ ಸಾಮಾನ್ಯವಾಗಿ ಕೃಷಿಗೆ ಒಗ್ಗಿದೆ. ಹೂ ಬಣ್ಣದ ನಿಗದಿಯ ಮೇಲೆ ಎರಡು ವಿಧಗಳು- ಬಿಳಿಜಾಜಿ, ಹಳದಿಜಾಜಿ. ಸೂಕ್ಷ್ಮವಾದರೂ ನವುರಾದ, ವೆಗಟಾಗದ, ಮೋಹಕವಾದ ನರುಗಂಪನ್ನು ಸೂಸುತ್ತದೆ.

**ತುಂಬೆ** (*Leucas aspera* Spr.)

ಪರ್ಯಾಯ ಪದಗಳು-

ಕನ್ನಡ: ತುಂಬಿ
ಸಂಸ್ಕೃತ: ರುದ್ರಪುಷ್ಪ

ಭಾರತದ ಬಂಜರು ಭೂಮಿಯಲ್ಲಿ ಇದರ ಸ್ವಾಭಾವಿಕ ಬೆಳೆ. ಈ ನೆಲೆ ಶಿವನು ಶ್ಮಶಾನವಾಸಿ ಎನ್ನುವುದರ ಧ್ವನಿಯನ್ನು ಪ್ರತಿಬಿಂಬಿಸುತ್ತದೆ, ನನಗೆ. ದಕ್ಷಿಣ ಭಾರತದ ಭಾಷೆಗಳಲ್ಲೆಲ್ಲ ಈ ಗಿಡದ ಹೆಸರು ತುಂಬೆ ಅಥವಾ ಅದರ ರೂಪಾಂತರಗಳು. ಸಂಸ್ಕೃತದ ರುದ್ರಪುಷ್ಪ ಎನ್ನುವುದು ರುದ್ರನಿಗೆ ಪ್ರಿಯವಾದ ಹೂ ಎಂಬದಷ್ಟೆ. ಈಚೀಚಿನ ನಾಮಕರಣದಂತೆ ಕಾಣುತ್ತದೆ.

ತುಂಬೆ ಒಂದೆರಡಡಿ ಎತ್ತರ ಬೆಳೆಯುವ ಕುರುಚಲು ಗಿಡ. ಎಲೆಗೆ ನಾಡುವೈದ್ಯದಲ್ಲಿ ಬಗೆ ಬಗೆಯ

ಹೂವುಗಳನ್ನು ಆರಿಸಿಕೊಂಡಾದ ಬಳಿಕ ಅವನ್ನು ಪೋಣಿಸಿ ಮಾಲೆಯನ್ನಾಗಿಸುವುದಕ್ಕಾಗಿ ಹರಿಹರನು ಬಂದು ಕುಳಿತುಕೊಂಡದ್ದು "ಬಾಲಚೂತದ ಕೆಳಗೆ". ಈ ಸಂದರ್ಭದಲ್ಲಿ 'ಬಾಲಚೂತ' ಎಂದರೆ ಎಳೆಯ (ಸಣ್ಣ) ಮಾವು ಎಂದು ಅರ್ಥಯಿಸುವುದು ಸಾಧುವಲ್ಲ ಎಂದು ನನ್ನ ಭಾವನೆ, ಹತ್ತಾರು ಬಗೆಯ ಹೂಗಳ ಸ್ವರೂಪವನ್ನೂ ಇಂಗಿತವನ್ನೂ ಅರಿತಿದ್ದ ಹರಿಹರ 'ಬಾಲ' ಎಂಬ ಪದವನ್ನು ಇಲ್ಲಿ 'ಆಗತಾನೆ ಎಲೆ ತಳಿರನ್ನು ಕೊನರಿಸಿದ' ಎಂಬ ಧ್ವನಿಯಲ್ಲಿ ಪ್ರಯೋಗಮಾಡಿರಬೇಕೆನ್ನಿಸುತ್ತದೆ. ಮಾಂದಳಿರಿಗೆ ಮನಸೋತ ಕವಿಗಳಿಗೇನೂ ಕೊರತೆಯಿಲ್ಲ. ತಳಿರಿನ ಬಣ್ಣ ತಾಮ್ರ. ಸುತ್ತುಮುತ್ತಲಿನ ಹಚ್ಚಿಲೆ ಸಮುದಾಯದ ನಡುವೆ ಈ ನೋಟ ಕಣ್ಮನಗಳನ್ನು ಸೆಳೆದುಕೊಳ್ಳುವಂಥದ್ದು. ಅದಕ್ಕೇ ಅಲ್ಲವೆ ಪಂಪನು "ತಳಿರೊಳ್ ನೀನೆ ಬೆಡಂಗನ್ನೆ" ಎಂದು ಕೊಂಡಾಡಿದ್ದು! ತಳಿರಿನೊಂದಿಗೆ ಕೋಗಿಲೆಯೂ ಹೂವಿನೊಂದಿಗೆ ದುಂಬಿಯೂ ಆಗಮಿಸುತ್ತವೆ. ಅಷ್ಟೇ ಅಲ್ಲ. ಮಾವಿನ ಮರವು

"ಎಳಗಿಳಿವಿಂಡಿನೋದುವ ಮಠಂ ಭ್ರಮರಂಗಳ ಗೀತಶಾಲೆ ಕೆಂ
ದಳಿರ್ಗಳ ಜನ್ಮಭೂಮಿ ವನಲಕ್ಷ್ಮಿಯ ಪೆರ್ಮೆಗನೋತಗಲ್ದ ಕೋ
ಮಳೆಯರ ಜೂಜು ಭೂತಳದ ಕಲ್ಪಕುಜಂ ಸಕಲಾವನೀರುಹಂ
ಗಳ ತಲೆನಾಯಕಂ (ಸೂಕ್ತಿಸುಧಾರ್ಣವಂ)

–ಹೀಗೊಂದು ಸಂಸ್ಥೆಯಾಗಿತ್ತು.

ಕಣ್ಣಿನ ನೋಟಕ್ಕೆ ಮಾತ್ರವಲ್ಲದೆ ಕವಿಯ ನಾಲಗೆಯನ್ನೂ ಲೊಟಗೆ ಹೊಡೆಸಿತು ಮಾವು– "ಪುದಿದೆಳೆಗಾಯ್ ವಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ವಸಂತದ ನಡು ಪಣ್ ವಸಂತದ ಸೆಜಗಿಂಗೆ......"

16ನೆ ಶತಮಾನದ ಮುಂಚೆ ಕವಿಗಳೂ ಪಾಮರರೂ ಉಂಡು ಬಾಯಿ ಚಪ್ಪರಿಸಿದ್ದು ನಾರುಕಾಯಿ, ಹುಳಿಕಾಯಿ, ಕಾಡುಜಾತಿ ಎಂದು ನನ್ನ ಊಹೆ. ಒಂದು ವೇಳೆ ಊರಿನಲ್ಲಿ ಬೆಳೆಸಿದ್ದಾದರೂ ಕಾಯಿನಲ್ಲಿಯೂ ಹಣ್ಣಿನಲ್ಲಿಯೂ ನಾರು ಹುಳಿಗಳು ಅಧಿಕ ಪ್ರಮಾಣದಲ್ಲಿಯೇ ಸೇರಿಕೊಂಡಿದ್ದಿರಬೇಕು. ಇಂದು ನಾವು ರುಚಿಯಿಂದ ತಿನ್ನುವ ಮಾವಿನ ಜಾತಿಗಳೆಲ್ಲ ಕಸಿಗೆ ಒಳಪಟ್ಟಿರುವಂಥವು. ಕಸಿವಿಧಾನ 15–16ನೇ ಶತಮಾನಗಳಲ್ಲಿ ನಮ್ಮ ದೇಶಕ್ಕೆ ಕಾಲಿಟ್ಟಿತು. ಪಶ್ಚಿಮದಿಂದ ಪೋರ್ಚುಗೀಸರೂ ವಾಯುವ್ಯದಿಂದ ಮೊಗಲರೂ ತಂದ ಕೊಡುಗೆ. ಇವರ ಕೈಯಿಂದ ಕಾಡುಮಾವು ಕಸಿವಿಧಾನಕ್ಕೆ ಪಳಗಿತು. ಇನಿಮಾವಿನ ಹೊಸ ಹೊಸ ರಖಮುಗಳನ್ನು ಒದಗಿಸಿತು. ಇಂದಿನ ಶ್ರೇಷ್ಠರಖಮುಗಳೆಲ್ಲ ಇವರ 'ವಾಸನೆ'ಯನ್ನು ತಳೆದ ಹೆಸರುಗಳಿಂದಲೇ ಪರಿಚಿತವಾಗಿವೆ– ಷಾ ಪಸಂದ್, ದಾಡೀಂ ಪಸಂದ್, ಬಾದ್‌ಷ, ದಿಲ್‌ಗೋವ, ಮಲ್‌ಗೋವ, ಆಲ್ಫಾನ್‌ಸೊ, ರುಮಾನಿ ಇತ್ಯಾದಿ.

ಈಗಿನ ಹುಣಸೆ ಮರ 1000 ವರ್ಷಕ್ಕೆ ಮುಂಚೆ ನಮ್ಮ ನಾಡಿನಲ್ಲಿತ್ತೆ? ಎಂಬ ಸಂದೇಹವಿದೆ. ಆ ಹಿಂದಿನ ಕಾಲದಲ್ಲಿ ಮಾವಿನಕಾಯೇ ಹುಳಿರುಚಿಯನ್ನೀಯುವ ಪದಾರ್ಥಗಳಲ್ಲೊಂದಾಗಿತ್ತು. ಆಮ್ರವೆಂಬ ಪ್ರಾಚೀನ ಸಂಸ್ಕೃತಪದವೂ ಇದಕ್ಕೆ ಸಾಕ್ಷಿಯೆಂಬಂತಿದೆ. ಉಪಯೋಗ ದೃಷ್ಟಿಯಿಂದ ಆಗಿನ ಜನ ಕಾಡುಮಾವಿನ ಕಾಯನ್ನು ತಂದು ಊರಿನಲ್ಲಿ ಬೆಳೆಸಿಕೊಂಡರು. ಕವಿ ಕಂಡ ಮಾವು, ಉಂಡ ಮಾವು ಇಂಥದ್ದು. ಆತನು ಕಾಡಿನಲ್ಲೇ, ಅದರ ಸ್ವಾಭಾವಿಕ ನೆಲೆಯಲ್ಲಿಯೇ, ಬೆಳೆಯುತ್ತಿದ್ದ ಮಾವನ್ನು ನೋಡಿದ್ದಿದ್ದರೆ ಇನ್ನೆಷ್ಟು ಕೊಂಡಾಡುತ್ತಿದ್ದನೋ, ಎಂಥೆಂಥ ಹೊಸ ಹೊಸ ಕವಿಸಮಯಗಳನ್ನು ನೇಯುತ್ತಿದ್ದನೋ! ಚೂತನ ರಾಜತ್ವವನ್ನು ನೋಡಬೇಕಾದರೆ ಅವನ ರಾಜ್ಯಕ್ಕೇ ಹೋಗಬೇಕು– ಬೆಟ್ಟ ಪ್ರದೇಶದ ಮಳೆಗಾಡುಗಳಿಗೆ. ಅಲ್ಲಿ ಅವನ ಎತ್ತರ 100–150ಅಡಿ, ಎದೆಸಮದ ಸುತ್ತಳತೆ 25–30 ಅಡಿ! ರೆಂಬೆಕೊಂಬೆಗಳಿಲ್ಲದ ನೀಟಾದ ಕಾಂಡ; ಕಾಂಡದ ಮೇಲ್ತುದಿಯಲ್ಲಿ ಎಲೆಕೊಡುಗೆ. ಏನು ಗಾಂಭೀರ್ಯ, ಅದೇನು ಸ್ಥಿರತೆ! ಕಾಯಿ ಹಣ್ಣಾಗಿ ನೆಲದ ಮೇಲೆ ಬಿದ್ದಾಗ ಫರ್ಲಾಂಗುದೂರ ಅದರ ಹುಳಿ–ಮಾದಕ ವಾಸನೆಯನ್ನು ಹರಡುತ್ತಾನೆ.ಆವಾಸನೆಗೆ ಆಕರ್ಷಿತರಾಗುವವರು ಕ್ರಿಮಿಯಿಂದ ಹಿಡಿದು ಮದಕರಿಯವರೆಗೆ! ಈ ಅಗಾಧಗಾತ್ರದ ಚೌಬೀನೆಯಿಂದ ದೋಣಿಗಳನ್ನು ಕೆತ್ತುತ್ತಾರೆ, ಹಲಗೆ ಕುಯ್ಯುತ್ತಾರೆ.

**ಮೊಲ್ಲೆ** (*Jasminum auriculatum* Vahl.)

ಪರ್ಯಾಯ ಪದಗಳು

ಕನ್ನಡ: ಕಾಡರುಮಲ್ಲಿಗೆ, ವಾಸಂತಿ ಮೊಲ್ಲೆ, ಮಧ್ಯಾಹ್ನ ಮಲ್ಲಿಗೆ.

ಜಾಜಿಯಂತೆಯೇ ಇದೂ ಬಳ್ಳಿ; ಅದರ ಹರವೇ ಇದರದೂ. 'ತುರುಗಿ ಮಲರ್ದು' ಎನ್ನುತ್ತಾನೆ ಪಂಪ. ನಿಜ. ಸಮೃದ್ಧಿಯಾಗಿ ಹೂಬಿಡುತ್ತದೆ. ಗಿಡದ ಮೇಲೆ ಮೊಗ್ಗು ಬಿರಿಯುವುದು ಸೂರ್ಯನು ನೆತ್ತಿಯ ಮೇಲಕ್ಕೆ ಬರುವ ಸಮಯದಲ್ಲಿ. ಇದು ಕವಿಸಮಯ ಅಲ್ಲ. ಹೀಗಾಗಿ ಮಧ್ಯಾಹ್ನದ ಮಲ್ಲಿಗೆ ಎಂಬ ವಿಶೇಷಣವನ್ನು ಸಂಪಾದಿಸಿಕೊಂಡಿದೆ.

ಬಿರಿದ ಮೊಲ್ಲೆಗಿಂತ ಮೊಗ್ಗುಮೊಲ್ಲೆಗೆ ಆಸೆ ಪಡುತ್ತಾರೆ, ಮುಡಿಯುತ್ತಾರೆ, ನಮ್ಮ ಹೆಂಗಸರು. ಎಂದರೆ ವಾಸನೆಗಿಂತ ರೂಪದಲ್ಲಿ ಚೆಲುವು ಕಂಡವರು ಇವರು. ಮೊಗ್ಗು ಪೋಣಿಸಿದ ದಂಡೆಗೊಂದು ಚೆಲುವಿದೆಯೆಂದು ನಾನೂ ಒಪ್ಪಿಕೊಳ್ಳುತ್ತೇನೆ.

**ರುದ್ರಜಟೆ** (*Hibiscus rosa-sincusis* L.)

ಇದು ಕೆಂಪು ದಾಸವಾಳವೆಂದು ಕೆಲವರ ಅಭಿಪ್ರಾಯ. ಸರಿಯಾದ ಅನನ್ಯತೆ ದೊರಕಿಲ್ಲ.

**ಸಂಪಿಗೆ** (*Michelia champaca* L.)

ಪರ್ಯಾಯ ಪದಗಳು

ಕನ್ನಡ: ಸಂಪಗೆ
ಸಂಸ್ಕೃತ: ಚಂಪಕಾ

ಹಿಮಾಲಯದ ಕೆಲವು ಪ್ರದೇಶಗಳೂ ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳೂ ಇದರ ತೌರು. ಸ್ವಾಭಾವಿಕ ಬೆಳವಣಿಗೆಯಲ್ಲಿ 100 ಅಡಿ ಎತ್ತರ ಬೆಳೆಯುತ್ತದೆ. ಒಳ್ಳೆಯ ಚೌಬೀನೆಯನ್ನೊದಗಿಸುತ್ತದೆಯಾದರೂ ಬಾಹುಳ್ಯ ಹೀನತೆಯಿಂದ ಉಪಯೋಗಕ್ಕೆ ಬಂದಿಲ್ಲ. ಹೂಗಳಿಗಾಗಿ ತೋಟಗಳಿಗೂ ಮನೆಗಳಿಗೂ ತಂದು ಬೆಳೆಸಿಕೊಳ್ಳಲಾಗಿದೆ. ಸಂಪಗೆಯ ತೋಪನ್ನು ನಿರ್ಮಿಸಬೇಕೆಂದೇ ಭೂಮಿಯನ್ನು ಮೀಸಲಾಗಿಟ್ಟ ಪ್ರಸಂಗಗಳನ್ನು ಚೋಳರ ಕೆಲವು ಶಾಸನಗಳು ತಿಳಿಸುತ್ತವೆ (249—1907; 18—1922)

ಬಹುಕಾಲದಿಂದಲೂ ಪರಿಚಿತವಾಗಿರುವ ಹೂ ಸಂಪಗೆ. ಪತಂಜಲಿಯ ಮಹಾಭಾಷ್ಯದಲ್ಲೂ ಜಾತಕಗಳಲ್ಲೂ, ಮಹಾ ಭಾರತದಲ್ಲೂ ಹೆಸರುವೆತ್ತಿದೆ, ಇದರ ನರುಗುಂಪಿನ ಕೀರ್ತಿ. ಹೂಗಳ, "ಪಡೆದೊಡೆ ಕಂಪಂ ಬಣ್ಣಂಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ ಪಡೆಯವು" ಎಂದು ಗೊಣಗಿಕೊಂಡು ಪಂಪನು ಎರಡನ್ನೂ ಪಡೆದ ಈ ಚಂಪಕಕ್ಕೆ ಇತರ ಹೂಗಳು ಸಮವೆ ಎಂದು ಕೇಳಿ ಸಮಾಧಾನ ಪಡೆದುಕೊಂಡಿದ್ದಾನೆ. ಅವನ ಹೇಳಿಕೆಯ ಪ್ರಕಾರ ಈ ಹೂವಿನ ಕಂಪನ್ನು 'ಗಟ್ಟನೆ' ನುಂಗಿದ ದುಂಬಿಗಳಿಗೇ ಅಜೀರ್ಣವಾಯಿತು ಎಂದ ಮೇಲೆ, ಆ ಕಂಪು ಬಹು ತೀಕ್ಷ್ಣವಾದದ್ದು ಎಂದು ತಿಳಿಯುತ್ತದೆಯಲ್ಲವೆ? ನಮ್ಮ ಮೂಗಿಗೂ ಅಷ್ಟೆ. ದೂರದ ವಾಸನೆಯೇನೋ ಹಿತವಾಗಿರುತ್ತದೆ; ಮೂಗಿನ ಮಗ್ಗುಲಿಗೆ ಹೂವನ್ನು ತಂದರೆ ಅದೇ ವಾಸನೆ ವೆಗಟಾಗುತ್ತದೆ.

ಹೂವಿನ ಪರಿಮಳವನ್ನು ಎಣ್ಣೆಯಲ್ಲಿ ಭಟ್ಟಿಯಿಳಿಸುವ ಹವ್ಯಾಸವೂ ಹಳೆಯದೇ. ಗಂಧಯುಕ್ತಿ ಪ್ರಕರಣಗಳಲ್ಲಿ ಇದು ಪ್ರಸ್ತಾಪವಿದೆ; 12ನೆಯ ಶತಮಾನದ ಮಾನಸೋಲ್ಲಾಸದಿಂದ ಚಂಪಕತೈಲವು ಅಭ್ಯಂಗನ ವಸ್ತುವಾಗಿತ್ತೆಂದು ತಿಳಿಯುತ್ತದೆ.

10–11ನೆಯ ಶತಮಾನಗಳಲ್ಲಿ ಸಂಪಗೆ ಹೂ ಪೂಜೆಗೆ ಉಪಯೋಗವಾಗಿತ್ತೆಂದು ಶೈವ 'ತೇವಾರ'ಗಳೂ ತಿಳಿಸುತ್ತವೆ. ಆದುದರಿಂದ "ಏನವ್ವ, ಸಂಪಗೆಯೆ, ಶಿವನ ಮುಡಿಗಿಂದು ನೀನೀವ ಪೊಸಕುಸುಮಮಂ ನೀಡು" ಎಂದು ಹರಿಹರನು ಯಾಚಿಸಿದ್ದು ಸಂಪ್ರದಾಯ ಸಮ್ಮತವಾಗಿಯೇ ಇದೆ.

ದಕ್ಷಿಣ ಭಾರತದಲ್ಲೆಲ್ಲ ಸಾಮಾನ್ಯವಾಗಿ ಬೆಳೆಯುತ್ತದೆ. ಬಹುಕಾಲದಿಂದಲೂ ಸಾಗುವಳಿ ಚೆನ್ನಾಗಿ ಒಗ್ಗಿದೆ ಮಾತ್ರವಲ್ಲ, ಅನೇಕ ಉಪಪಂಗಡಗಳಿಗೆ ಜನ್ಮಕೊಟ್ಟಿದೆ: ದುಂಡುಮಲ್ಲಿಗೆ, ಸೂಜಿಮಲ್ಲಿಗೆ, ನಿತ್ಯಮಲ್ಲಿಗೆ, 'ರಾಮಬಾಣ', 'ಕಾಕಡಾ'–ಇತ್ಯಾದಿ. ಕೃಷಿ ಪ್ರದೇಶವನ್ನು ಕುರಿತ ಹೆಸರುಗಳೂ ಉಂಟು. ಅಂಬೂರು ಮಲ್ಲಿ(ಗೆ), ಚಿತ್ತೂರು ಮಲ್ಲಿ(ಗೆ), ಮೈಸೂರು ಮಲ್ಲಿಗೆ, ಇತ್ಯಾದಿ, ಈ ಹೆಸರುಗಳು ಬಹು ಪಾಲು ಸ್ವಾಭಿಮಾನದ ಸೂಚಕಗಳೇ ಹೊರತು ವಿಶಿಷ್ಟತೆಯ ಕುರುಹೇನೂ ಅಲ್ಲ.

ಕೆಲವು ಜಾತಿಗಳಲ್ಲಿ ಹೂ ಎಲೆಮರೆಯಲ್ಲಿರುತ್ತದೆ. ಸುಭಾಷಿತಕಾರರಿಗೆ ಪ್ರತಿಭೆಯ ಕಾವು ಏರಿತು; ಇಂಥ ಮಲ್ಲಿಗೆಯನ್ನು ಸುಳಿಗಾಳಿ ಮುತ್ತು ಕೊಡದು, ದುಂಬಿ ಬಂಡನ್ನು ಹೀರದು ಎಂದರು (ಶಾರ್ಙ್ಗಧರ ಪದ್ಧತಿ, 1010).

ಶಿವನಿಗೆ ಮಲ್ಲಿಕಾರ್ಜುನನೆಂಬ ಹೆಸರನ್ನು ಮುಡಿಸಿದ್ದು ರೂಢಿಸಿದ್ದು ಕರ್ನಾಟಕ ದೇಶದಲ್ಲಿ ಎಂದು ಕಾಣುತ್ತದೆ. ಇದರ ಹೊರಗಡೆ ಈ ಪದದ ಪ್ರಚಾರವಿದ್ದಂತೆ ಕಾಣದು. ಇದೇ ಪದದ ರೂಪಗಳೇ ಮಲ್ಲೇಶ, ಮಲ್ಲಪ್ಪ, ಮಲ್ಲವ್ವ, ಮಲ್ಲಾರಾಧ್ಯ ಇತ್ಯಾದಿ ಎಂದು ನನ್ನ ಎಣಿಕೆ. ಈ ಹೆಸರುಗಳಿಗೆ ಮಲ್ಲಿಗೆ ಹೂ ಆಕರವಾಗಿರಬಹುದೆ?

ಮಲ್ಲಿಗೆ ಹೂವಿನಿಂದ ಎಷ್ಟು ಯಥೇಷ್ಟವಾಗಿ ಅಲಂಕರಿಸಿದರೂ ಕಾಮನಿಗೆ ತೃಪ್ತಿಯಾಗದು ಎಂದಿದ್ದಾನೆ ಪಂಪ. ನಮ್ಮ ಇಂದಿನ ಅಧಿಕಾರಿ ಸಾಹೇಬರು ಕೆಲವರಿಗೆ ಮೈಸೂರು ಮಲ್ಲಿಗೆ ಮಾಲೆ–ದೊಡ್ಡಮಾಲೆ, ಖಾಸಾಮಾಲೆ–ಕೊರಳಿಗೆ ಬೀಳದಿದ್ದರೆ ಅವರಿಗಾದರೂ ತೃಪ್ತಿಬರುತ್ತದೆಯೇನು?

## ಮಾಧವೀಲತೆ, ಅದಿರ್ಗಂತಿ (Hiptage madablota)

ಪರ್ಯಾಯ ಪದಗಳು

ಕನ್ನಡ: ಅದಿರ್ಮುತ್ತೆ, ಕುರುಕತ್ತಿ
ಸಂಸ್ಕೃತ: ಅತಿಮುಕ್ತಾ, ಮಾಧವೀ, ಮಾಲತೀ

ಇದನ್ನು 'ವಸಂತದೂತಿ' ಎಂದು ಆದಿಪುರಾಣ, ಚಂದ್ರಪ್ರಭ ಚರಿತೆ ಮೊದಲಾದ ಜೈನಗ್ರಂಥಗಳು ಹೆಸರಿಸುತ್ತವೆ,–ಚೈತ್ರದ ಆಗಮನಕ್ಕೆ ಇದು ಮುನ್ಸೂಚಿ ಎಂಬ ಅರ್ಥದಲ್ಲಿ. ಕಾಡಿನಲ್ಲಿ ಇತರ ಗಿಡ ಮರಗಳು ಚಿಗುರೊಡೆಯುವುದಕ್ಕೆ ಮುಂಚೆಯೇ ಮಾಲತಿಯು ಹೊಸ ಎಲೆ ಹೂಗಳನ್ನು ತಳೆಯುತ್ತಾಳೆ. ನಮ್ಮ ಪಶ್ಚಿಮ ಘಟ್ಟದ ಕಾಡುಗಳಲ್ಲಿ ಯಥೇಷ್ಟವಾಗಿ ಬೆಳೆಯುತ್ತದೆ. 'ಲತಾ' ಎನ್ನಿಸಿಕೊಂಡರೂ ಒಳ್ಳೆಯ ಧಡೂತಿಯಾದ ಕಾಂಡಕೊಂಬೆಗಳನ್ನು ತಳೆದ 'ಮರಬಳ್ಳಿ' ಇದು.

ಬಹುಕಾಲದಿಂದಲೂ ಕವಿಗಳ ಬಾಯಲ್ಲಿ ಬಗೆ ಬಗೆಯಾಗಿ ಹೊಗಳಿಸಿಕೊಂಡ ಗಿಡ ಮಾಧವಿ. ಸ್ವಾಭಾವಿಕವಾದ ನೆಲೆಯಲ್ಲಿ ಈ ಲತೆ ಹಿರಿಯ ಮರಗಳ ಮೇಲೆ ಹಬ್ಬಿ ಎಲೆ ಛಾವಣಿಯನ್ನು ಆಕ್ರಮಿಸಿಕೊಂಡು ಅಲ್ಲಿಂದಲೇ ಅಕ್ಕಪಕ್ಕದ ಮರಗಳಿಗೆ 'ದಾಂಗುಡಿ'ಯಿಟ್ಟು ಹಾರಿ ಹಬ್ಬುತ್ತದೆ. ಹೂ ತಳೆದಾಗ ವಾಸನೆ ಬರುವ ದಿಕ್ಕಿನಿಂದಲೇ ಇದರ ಗುರುತು ಹಿಡಿಯಬಹುದು–ಅಷ್ಟು ವೈಯಕ್ತಿಕವಾದ ನರುಗಂಪು; ಮೂಗನ್ನು ಕೆರಳಿಸುವಂಥದಲ್ಲವಾದರೂ ಒಂದು ಬಗೆಯ ಮಾದಕ ಮಿಳಿತವಾದ ವಾಸನೆ.

ಹೂವಿನ ಪರಿಮಳಕ್ಕೆ ಮಾರುಹೋದ ಕವಿಗಳು ಅದರ ರಚನೆಗೂ ರೂಪಕ್ಕೂ ಏಕೆ ಒಲಿಯದೆ ಹೋದರೋ? ಹರಿಹರನೂ "ನಿನ್ನ ಸುಖದ ಸದ್ಗಂಧ ಮೀಸಲನೀಯ್" ಎಂದಿದ್ದಾನೆ. ಬಿರಿದ ಹೂ ಮುದುರಿಂದ ಚಿಟ್ಟೆಯಂತಿರುತ್ತದೆ. ಎಸಳುಗಳ ರೂಪ ರೆಕ್ಕೆಯಂತೆಯೇ. ಬಿಳಿ ಎಸಳಿನ ಕೆಳಭಾಗದಲ್ಲಿ ಹಳದಿಯ ಬಣ್ಣ. ಕಂಪಿನಷ್ಟೇ ವೈಯಕ್ತಿಕವಾದ ಮೋಹಕರೂಪ. ಕಾಯಿಗೆ ಕಾಯಿಗೆ ರೆಕ್ಕೆಗಳುಂಟು. ಗಾಳಿಯಲ್ಲಿ ತೂರಾಡಿ ನೆಲಕ್ಕೆ ಬಿದ್ದು ಮೊಳೆಯುತ್ತದೆ.

## ಮುಂಗುಡಿ

"ಮುಂಗುಡಿಯ ಕಂಪು" ಎನ್ನುತ್ತಾನೆ ಹರಿಹರ. ಇದರ ಅನನ್ಯತೆ ದೊರಕಿಲ್ಲ.

ಬಹುದೆನ್ನುವುದಕ್ಕೆ ಸ್ವಲ್ಪ ಆಧಾರವಿದೆ. ಕ್ರಿ.ಶ. 11ನೆ ಶತಮಾನದಲ್ಲಿ ಈ ಬಾಂಧವ್ಯ ಏರ್ಪಟ್ಟಿದ್ದಿರಬೇಕು. ದಕ್ಷಿಣ ಭಾರತದಲ್ಲಿ ಶೈವಸಮಯ ಶಾಖೆಗಳು ಉಚ್ಛ್ರಾಯಕ್ಕೆ ಬರುತ್ತಿದ್ದ ಕಾಲ ಇದು. ಶಿವಾಲಯಗಳು ಅಧಿಕ ಸಂಖ್ಯೆಯಲ್ಲಿ ಸ್ಥಾಪನಗೊಳ್ಳುವುದಕ್ಕೆ ಆರಂಭವಾಗಿದ್ದ ಕಾಲ ಇದು. ಶೈವಾಗಮಗಳು ವಸ್ತು ವೈವಿಧ್ಯತೆಯಲ್ಲಿ ವಿಸ್ತೀರ್ಣಗೊಂಡ ಕಾಲ ಇದು. ಶಿವಪುರಾಣಗಳಿಗೆ ಹಿನ್ನೆಲೆಯನ್ನೊದಗಿಸಿದ ಕಾಲ ಇದು. ಈ ಸಂದರ್ಭದಲ್ಲಿ ಮುಬ್ಬಾಗದ ಬಿಲ್ವದೆಲೆ ತ್ರಿನೇತ್ರನ ಬಿಂಬವಾಗಿರಬೇಕು.

11ನೆಯ ಶತಮಾನದ ಚಾಲುಕ್ಯ ಶಾಸನವೊಂದು ಪದ್ಮಶಿವನೆಂಬ ಪೂಜಾರಿಯು ಕಟ್ಟಿಸಿದ್ದ ನಾಗೇಶ್ವರ ದೇವಾಲಯಕ್ಕೆ ಸಾವಂತ ರಾಮಯ್ಯನೆಂಬಾತನು ಬಿಲ್ವಪತ್ರೆಯನ್ನು ಸರಬರಾಜು ಮಾಡಿದ ನೆಂದೂ, ಅದೇ ಪೂಜಾರಿಯು ಈತನಿಗೆ ನೆಲವನ್ನು ದತ್ತಿಬಿಟ್ಟನೆಂದೂ ತಿಳಿಸುತ್ತದೆ.

## ಭದ್ರಮುಖಿ

"ಭದ್ರಮುಖಿ ಮೊದಲಾದ ನವಪತ್ರ ಜಾಲ" ಎಂದಿದ್ದಾನೆ, ಹರಿಹರ. ಆಗಮಿಕ ಭಾಷೆಯಲ್ಲಿ 'ನವಪತ್ರ', 'ಪಂಚಪರ್ಣ', 'ಅಷ್ಟಪುಷ್ಪ' ಮೊದಲಾದ ಮಾತುಗಳು ಆಯಾ ಸಂಖ್ಯೆಗನುಸಾರವಾಗಿ ಜಾತಿ ಸಂಚಯಗಳನ್ನು ನಿರ್ದೇಶಿಸುತ್ತವೆ. ಭದ್ರಮುಖಿಯೂ 'ನವಪತ್ರ'ಗಳಲ್ಲಿ ಒಂದಾಗಿತ್ತು, ಎಂದಿಟ್ಟು ಕೊಳ್ಳಬಹುದು. ಈ ಗಿಡದ ಅನನ್ಯತೆ ತಿಳಿಯದು.

## ಮರುಗ (*Origanum marjorana* L.)

ಪರ್ಯಾಯ ಪದಗಳು:

ಕನ್ನಡ: ಮರು, ಮರುವು

ಹರಿಹರನ ಪ್ರಕಾರ ಇದು "ಪರಿಮಳದ ಸಸಿ". ಇಲ್ಲಿ ಸಸಿ ಎಂದರೆ ಬೀಜದಿಂದ ಆಗತಾನೆ ಉತ್ಪನ್ನ ವಾದ ಮೊಳಕೆ ಅಲ್ಲ. ಈ ಗಿಡದ ಗಾತ್ರವೇ ಸಣ್ಣ; ಹೆಚ್ಚು ಹೆಚ್ಚೆಂದರೆ ಆರೆಂಟಂಗುಲ ಎತ್ತರ. "ಬಂಧುರ ಗಂಧ" ಅಧಿಕ ಪ್ರಮಾಣದಲ್ಲಿ ಅಡಗಿರುವುದು ಎಲೆಯಲ್ಲಾದರೂ ಗಿಡದ ಇತರ ಭಾಗಗಳಲ್ಲಿಯೂ (ಬೇರನ್ನುಳಿದು) ಹರಡಿದೆ. ಈ ಪರಿಮಳವು "ಮದನರಾಗ"ವನ್ನು ಹೆಚ್ಚು ಮಾಡುತ್ತದೆ ಎನ್ನುತ್ತಾನೆ, ಪಂಪ. ಅಲ್ಲವೆನ್ನುವಂತಿಲ್ಲ.

11ನೆಯ ಶತಮಾನದಲ್ಲಿ ಈ ಗಿಡ ಶಾಸನೋಕ್ತವಾಗಿದೆ–ಆಗಲೇ ಪರಿಮಳ ದ್ರವ್ಯಗಳಲ್ಲೊಂ ದಾಗಿತ್ತು.

ಮೆಡಿಟರೇನಿಯನ್ ಸಮುದ್ರದ ತೀರ ಪ್ರದೇಶಗಳು (ದಕ್ಷಿಣ ಯೂರೋಪು ಮತ್ತು ಉತ್ತರ ಆಫ್ರಿಕದ ಕರಾವಳಿ) ಮರುಗದ ತೌರು. ಕಡಲ ವಾಣಿಜ್ಯದ ಮೂಲಕ ದಕ್ಷಿಣ ಭಾರತಕ್ಕೆ ಆಗಮಿಸಿದ್ದಿರ ಬೇಕು. ಉತ್ತರ ಭಾರತದಲ್ಲಿ ಈ ಗಿಡ ಅಷ್ಟೊಂದು ಬೇರು ಬಿಟ್ಟಿಲ್ಲ; ಪಂಜಾಬು ಪ್ರದೇಶದಲ್ಲಿನಯೂ ಬಂಗಾಳದಲ್ಲಿಯೂ ಅಲ್ಪಸ್ವಲ್ಪ ಪರಿಚಿತವಾಗಿದೆ. ತೌರುಮನೆಯಲ್ಲಿ (ಏಷ್ಯಾ,ಮೈನರ್, ಅರೇಬಿಯ, ಇಟಲಿ, ಇತ್ಯಾದಿ) ಈ ಗಿಡಕ್ಕೆ ಮರುದ್, ಮರುದಕುಷ್, ಮರುದ್ ಕೌಸ್ ಎಂದೆಲ್ಲ ಮಾರ್ಪಾಟು ಹೊಂದುವ ಒಂದೇ ಬುಡಕಟ್ಟಿಗೆ ಸೇರಿದ ಹೆಸರುಗಳಿವೆ. ಈ ಪ್ರದೇಶಗಳ ಮಗ್ಗುಲಲ್ಲೇ ಇರುವ ಸಿಂಧು ಪಂಜಾಬುಗಳಲ್ಲೂ ಮರವೋ, ಮರುದ್‌ವೋ ಎಂದು ರೂಪಾಂತರವಾಗಿದೆ. ಬಂಗಾಳದ ಮರ್ರು, ಕನ್ನಡದ ಮರುಗ, ತೆಲುಗು ಮಲೆಯಾಳಗಳ ಮರುವಂ, ಮರುಗಂ, ತಮಿಳಿನ ಮರುವು,–ಇವೆಲ್ಲವೂ ಅದೇ ಬುಡಕಟ್ಟಿನವು. ಎಂದರೆ ಹೋದೆಡೆಯಲ್ಲೆಲ್ಲ ಅದೇ ಹೆಸರಿನ ರೂಪಭೇದಗಳನ್ನು ಪಡೆದುಕೊಂಡಿದೆ, ಆದಿವಾಸಸ್ಥಾನದ ವಾಸನೆಯನ್ನು ಉಳಿಸಿಕೊಂಡಿದೆ.

## ಮಲ್ಲಿಗೆ (*Jasminum sambac* Ait.)

ಮೊಲ್ಲೆಯ ಪರಿಮಳಕ್ಕಿಂತಲೂ ತೀಕ್ಷ್ಣವಾದದ್ದು ಮಲ್ಲಿಗೆಯದು.

ಎರಡನೆ ಪ್ರಶ್ನೆಯನ್ನು ಕುರಿತು: ನೀರಿಯಮ್ ಇಂಡಿಕಮ್ ಎಂಬ ಹೆಸರೊಂದರ ಮಾತ್ರದಿಂದಲೇ ಈ ಗಿಡ ನಮ್ಮ ದೇಶದ್ದು ಎಂದು ಬಗೆಯಲಾಗದು. ಭಾರತದ ಸ್ವಾಭಾವಿಕ ವನ್ಯಪ್ರದೇಶಗಳಲ್ಲೆಲ್ಲಿಯೂ ಈ ಗಿಡ ಕಾಣದು. ಪರ್ಷಿಯ, ಆಫ್ಘಾನಿಸ್ತಾನ ಮೊದಲಾದ ಮೆಡಿಟರೇನಿಯನ್ ಪ್ರದೇಶಗಳು ಈ ಗಿಡದ ತೌರು. ಮೊಗಲರ ಆಳ್ವಿಕೆಯಲ್ಲಿ ಭಾರತಕ್ಕೆ ವಲಸೆ ಬಂದಿರಬೇಕೆಂದು ತೋರುತ್ತದೆ.

ಹೀಗಾಗಿ 16ನೆ ಶತಮಾನಕ್ಕೂ ಹಿಂದೆಯೇ ಸಾಹಿತ್ಯೋಕ್ತವಾದ ಈ ಗಿಡಗಳು ಯಾವವು? ಸದ್ಯಕ್ಕೆ ಸಮಂಜಸವಾದ ಉತ್ತರ ಸಿಗುವಂತಿಲ್ಲ.

### ಬಾಳೆಲೆ (*Musa* Paradisiaca L.; M. Sapientum L.; M. Superba L.)

"ಒಂದು ಸಲ ಹೂತಳೆದಾದ ಮೇಲೆ ಸಾಯುತ್ತದೆ ಬಾಳೆ–ಇದು ವಿಧಿಯ ಅಣಕ; ರುಚಿಹೀನವಾದ ಹಣ್ಣುಬಿಡುವ ತಾಟಿಯ ಮರ ನಾಚಿಕೆಯಿಂದ ಸಾಯಬಾರದೆ?" ಎಂದು ಸುಭಾಷಿತಕಾರರು ಬಾಳೆಯ ಸಿಹಿಯನ್ನೂ ತಾಳೆಯ ಕಹಿಯನ್ನೂ ವ್ಯಕ್ತಪಡಿಸಿದ್ದಾರೆ (ಶಾರ್ಙ್ಗಧರ ಪದ್ಧತಿ 1025; ಸುಭಾಷಿತ ರತ್ನಾಕರ 1).

ಬಾಳೆ ಬಹುಕಾಲದಿಂದಲೂ ನಮಗೆ ಪರಿಚಿತವಾಗಿರುವ ಗಿಡ. ಬೌದ್ಧಯುಗದ ಶಿಲಾಶಿಲ್ಪಗಳಲ್ಲಿ ಇದು ಕೊನರಿದೆ. ಬಾಳೆಗಿಡದ ಒಂದೊಂದು ಭಾಗವೂ ಮಾನವನ ಉಪಯೋಗಕ್ಕೆ ಒಗ್ಗಿರುವುದಾದರೂ ಇದನ್ನು 'ಕಲ್ಪದ್ರುಮ'ದ ಪಟ್ಟಕ್ಕೆ ಏರಿಸಿಲ್ಲ. ಒಂದು ಪ್ರದೇಶದ ಸಸ್ಯಸಂಪತ್ತನ್ನು ವರ್ಣಿಸುವಾಗ ನಮ್ಮ ಕವಿಗಳು ಬಾಳೆಯನ್ನು ಹೆಸರಿಸದಿರುವುದು ಅಪರೂಪ. ಮಂಗಳಾಮಂಗಳಾಚರಣೆಗಳೆರಡಕ್ಕೂ ಬಾಳೆ ಬೇಕು. ದೇವರ ನೈವೇದ್ಯಕ್ಕೆ ಬೇಕು. ನಮ್ಮ ನಾಲಗೆಗೆ ಬೇಕು. ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿ ಹೋಗಿದೆ ಬಾಳೆ.

ಚೆಲುವೆಯ ಅಂಗಗಳಿಗೆ ಬಾಳೆಯನ್ನು ಹೋಲಿಸುವುದೂ, ಶತ್ರುವಿನ ಬಲಹೀನತೆಗೆ ಬಾಳೆಯ ಕಾಂಡವನ್ನು ಒಪ್ಪವಿಡುವುದೂ ಕವಿಸಹಜವಾದದ್ದು.

ಅಕ್ಕಮಹಾದೇವಿಯ "ತನು ಕದಳಿ ಮನ ಕದಳಿ..." ಎಂದು ಆರಂಭವಾಗುವ ವಚನದಲ್ಲಿ 'ಕದಳಿ' ಪದದ ಅಂತರ್ಯಾರ್ಥವೇನೋ? ಟಿಪ್ಪಣಿಗಳಲ್ಲಿ ಬಾಳೆ ಎಂದೇ ಅರ್ಥಯಿಸಿರುವುದಾದರೂ, ಈ ಅನನ್ಯತೆಯು ಶಾಸ್ತ್ರರೀತ್ಯಾ ಸಾಧುವಾಗಿದೆಯಾದರೂ, ಪದಕ್ಕೆ ಇನ್ನಾವುದೋ ಸಂಜ್ಞೆಯಿರಬೇಕೆನ್ನಿಸುತ್ತದೆ. ಇನ್ನೂ ಒಂದು ವಿಶೇಷವನ್ನು ಇಲ್ಲಿ ಗಮನಿಸಬೇಕು. ದಕ್ಷಿಣಭಾರತದಲ್ಲಿ ನಾಥ ಸಂಪ್ರದಾಯದ ಕ್ಷೇತ್ರಗಳಿಗೆ ಕದಳೀ ಕ್ಷೇತ್ರವೆನ್ನುತ್ತಾರೆ; ಕದಿರಿ ಎಂದು ಆಡುಮಾತಿನಲ್ಲಿ ಅಪಭ್ರಂಶವಾಗಲೂ ಬಹುದು. 11–12ನೆಯ ಶತಮಾನಗಳಲ್ಲಿ ನಾಥ ಸಂಪ್ರದಾಯ ದಕ್ಷಿಣ ಭಾರತದ ಕೆಲವು ಭಾಗಗಳಲ್ಲಿ ಊರ್ಜಿತವಾಗಿತ್ತು. ಯೋಗಾಭ್ಯಾಸ ಪರಿಭಾಷೆಯಲ್ಲಿ ಕದಳಿಗೇನಾದರೂ ವಿಶೇಷಾರ್ಥವಿರಬಹುದೆ?

### ಬೆಲ್ಲಪತ್ರೆ (*Aegle Marmelos* Corr.)

ಪರ್ಯಾಯ ಪದಗಳು:

ಕನ್ನಡ: ಬಿಲ್ಪತ್ರೆ, ಬಿಲ್ವ, ಬಿಲ್ಲ, ವಿಲ್ಲ.
ಸಂಸ್ಕೃತ: ಬಿಲ್ವ, ವಿಲ್ವ

ಚರಕ ಶುಶ್ರುತರ ಕಾಲದಿಂದಲೂ ವೈದ್ಯ ಪ್ರಯೋಗದ ಮೂಲಕ ಚಿರಪರಿಚಿತವಾಗಿರುವ ಮರ. ದಕ್ಷಿಣ ಭಾರತಾದ್ಯಂತ (ಉತ್ತರ ಭಾರತದಲ್ಲಿಯೂ)–3000 ಅಡಿಗಿಂತಲೂ ಎತ್ತರವಿಲ್ಲದ ಪ್ರದೇಶಗಳಲ್ಲಿ–ಸ್ವಾಭಾವಿಕವಾಗಿ ಬೆಳೆಯುತ್ತದೆ. ಬಿಲ್ವದ ಎಲೆ ಮುಬ್ಭಾಗವಾಗಿದ್ದು–ಮೂರು ಉಪಪತ್ರಗಳಿಂದ ಕೂಡಿ–ಒಂದಾದದ್ದು; ಮಧ್ಯದ ಉಪಪತ್ರ ಮಿಕ್ಕ ಎರಡಕ್ಕಿಂತ ಸ್ವಲ್ಪ ಎತ್ತರದಲ್ಲಿದೆ, ಮುಕ್ಕಣ್ಣನ ನಡುಗಣ್ಣಿಗೂ ಉಳಿದೆರಡಕ್ಕೂ ಇರುವ ಸಂಬಂಧ.

ಬಿಲ್ವಪತ್ರೆಗೂ ಶಿವನಿಗೂ ಬಹುಕಾಲದ ನಂಟು. ಇದು ದಕ್ಷಿಣ ಭಾರತದಲ್ಲಿ ಆರಂಭವಾಗಿರ



ಕಕ್ಕೆ



ಕಮಲ

ಹೀಗಾಗಿ ಸ್ಯಾಮಂತಿಯೂ ಗೊಜ್ಜುಗೆಯೂ ಕಾಲಂದುಗೆ–ಕಾಲ್ಗೆಜ್ಜೆಗಳ ನಕಾಸೆಯಲ್ಲಿ ಹವಣಾಗಿ ಅತಿತೀಕ್ಷ್ಣವಾದ ನೀಲಿ ಅಥವಾ ಕೆಂಪು ಬಣ್ಣದ ಹೂಗಳು ಎನ್ನಬಹುದೆ? ಆ ಹೂಗಳು ಕಾಲ ಮಾರ್ಪಾಟಿನಲ್ಲಿ ಹಿಂದೆ ಸರಿದು ಹೋಗಿ, ಹೆಸರೊಂದು ಮಾತ್ರ ಉಳಿದುಕೊಂಡು ಬಂದಿರುವಂತಿದೆ. ಜನಸಾಮಾನ್ಯದ ಬಾಯಲ್ಲಿ ಹೊರಗಿನಿಂದ ಬಂದು ನೆಲಸಿದ ಕ್ರೈಸೇಂತಿಮಮ್ ಇಂಡಿಕಮ್ಮಿಗೆ ಈ ಹೆಸರು ಅಂಟಿರಬಹುದಲ್ಲವೆ?

### ಸುರಹೊನ್ನೆ

ಹರಿಹರನ ವಾಕ್ಯ ಹೀಗಿದೆ:

"ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳದರಸಿ
ನೀಮುನ್ನ ಪುಲಿಗೆರೆಯ ಸೋಮಯ್ಯನಂ ಬರಿಸಿ
ಕೊಂಡ ಸದ್ಭಕ್ತಿ ಪರಿಯುಂಟೆ ಬಾ..."

ಹೊನ್ನೆ ಮತ್ತು ಸುರಹೊನ್ನೆಗಳು –ಬಿಡಿಬಿಡಿಯಾಗಿ ಗಣಿಸಿದರೆ–ಎರಡೂ ಬೇರೆ ಬೇರೆ ಜಾತಿಗಳು: ಹೊನ್ನೆ = ಬೆಂಗೆ = ವೇಂಗೆ–**Petrocarpus marsupium** ; ಸುರಹೊನ್ನೆ – ನಾಗ = ಪುನ್ನಾಗ **calophyllum inophyllum**

ಹರಿಹರನು ಹೂಗಳನ್ನು ಆತ್ಮೀಯವಾದ ಪ್ರಿಯವಚನಗಳಿಂದ ಸಂಬೋಧಿಸುತ್ತಿದ್ದನೆಂಬುದನ್ನು 'ಸುಜನಾ' ತೋರಿಸಿದ್ದಾರೆ. "ನನ್ನ ಚಿನ್ನವೆ (ಹೊನ್ನೆ)! ದೈವೀಕವಾದ ಹೊನ್ನೆ (ಸುರಹೊನ್ನೆ)ಯೆ!" ಎಂಬ ಧ್ವನಿಯಲ್ಲಿ "ಏನೆನ್ನ ಹೊನ್ನೆ, ಸುರಹೊನ್ನೆ" ಎಂಬ ಪದಸರಣಿಯನ್ನು ಜೋಡಿಸಿರುವಂತಿದೆ.

"ಎಸಳುಗಳನ್ನು ಚೆನ್ನಾಗಿ ಮುತ್ತಿನಲ್ಲಿ ಕಡೆದಿಟ್ಟು, ಅದರ ನಡುವೆ ಚಿನ್ನದ ಪುಡಿಯನ್ನು ಕೇಸರದ ಆಕೃತಿಯಲ್ಲಿ ಹರಡಿ, ಸೊಗಸಾದ ಕೆಂಪು ಮಾಣಿಕ್ಯದ ನುಣುಪಾದ ಹರಳನ್ನು ಅಲ್ಲಿಗೆ ಬೀಜಕೋಶದಂತೆ ಜೋಡಿಸಿ–"ಎಂದೆಲ್ಲ ಕಣ್ಣಿಗೆ ಕಟ್ಟಿದಂತೆ ಹೂವಿನ ವರ್ಣಚಿತ್ರವನ್ನು ಬಿಡಿಸಿ "ಪೂಗಳೊಳೇಂ ಸುರಹೊನ್ನೆ ಚೆನ್ನಮೋ" ಎಂದು ಉದ್ಗಾರ ತೆಗೆಯಲಿಲ್ಲವೆ, ಪಂಪ?–ಅದೇ ಈ ಸುರಹೊನ್ನೆ!

ತಮಿಳಿನ 'ಸಂಗ' ಕವಿಗಳಿಗೆ ಸುರಹೊನ್ನೆಮರ (ಪುನ್ನೈ) ಅನೇಕ ಉಪಮಾನ ಉಪಮೇಯಗಳನ್ನೂ ಕವಿಸಮಯಗಳನ್ನೂ ಒದಗಿಸಿತು. ಕಬ್ಬಿಣದಂಥ ಕೊಂಬೆಗಳು, ಪಚ್ಚೆಯಂಥ ಎಲೆಗಳು, ಬೆಳ್ಳಿಯಂಥ ಹೂಗಳು, ಚಿನ್ನದ ಪರಾಗ (ನಟ್ರಿಣೈ, 249). ನೆಯ್ದಲು ಹೂವಿನ ಮೇಲೆ ಸುರಹೊನ್ನೆಯ ಹಳದಿ ಪರಾಗ ಚೆಲ್ಲಿದಾಗ ನೀಲಮಣಿಯಿಂದ ಕಡೆದ ಸಂಪುಟದಲ್ಲಿಟ್ಟ ಚಿನ್ನದ ನೆನಪು ಮೂಡಿಸಿತು (ಐಂಗುರುನೂಱು, 189). ಸುರಹೊನ್ನೆಯ ಮೊಗ್ಗುಗಳನ್ನು ಕಂಡ ಕವಿಗೆ ಮುತ್ತುಗಳ ನೆನಪಾಯಿತಂತೆ; ಮುತ್ತುಗಳನ್ನು ಉದುರಿಸುವ ಸುರಹೊನ್ನೆ ಎಂದಿದ್ದಾನೆ (ಶಿರುಪಾಣಾಱುಪ್ಪಡೈ).

ಮಳೆಗಾಡುಗಳಲ್ಲಿ ಸುರಹೊನ್ನೆ ಹೆಮ್ಮರವಾಗಿ ಬೆಳೆಯುತ್ತದೆ–150 ಅಡಿ ಉನ್ನತವಾಗಿ ಏರುವ ಮರಗಳೂ ಉಂಟು. ಸಮುದ್ರ ತೀರದಲ್ಲಿರುವಂಥವು ನೆಲದಿಂದ 10 ಅಡಿ ಎತ್ತರದಲ್ಲೇ ಕವಲೊಡೆದು ಮರದ ಹರವು ವಿಸ್ತಾರಗೊಂಡು ಎತ್ತರ ಕಡಿಮೆಯಾಗುತ್ತದೆ. ತಮಿಳು ಕವಿಗಳು ಕಂಡದ್ದು ಇಂಥಮರ. ಮರಳು ತೀರದ ಮೇಲೆ ನಿಂತಿರುವ ಮರದ ನೆಳಲು ತಂಪಾದದ್ದು, ನೆಳಲಿನ ಕಪ್ಪು ಮರಳ ಮೇಲೆ ಚೆಲ್ಲಿದ ಸೂರ್ಯ ಬೆಳಕಿನೊಡನೆ ವಿರುದ್ಧಭಾವದಲ್ಲಿತ್ತು (ನಟ್ರಿಣೈ, 354). ಇದೇ ಭೂದೃಶ್ಯ ಇನ್ನೊಬ್ಬ ಕವಿಗೆ ಕಪು ರೆಂಬೆಗಳ ಸುರಹೊನ್ನೆಯ ಘನೀಭೂತವಾದ ನೆಳಲಿನೊಂದಿಗೆ ಬಿಳಿಮರಳಿನ ಮೇಲೆ ಬಿದ್ದ ಬೆಳಕು ಘನೀಭೂತವಾದ ಬೆಳದಿಂಗಳಂತೆ ಕಂಡಿತು (ಕುರುಂತೊಕೈ, 123)

ಶಿವನ ಪ್ರೀತಿಗೆ ಒಳಗಾದದ್ದು ಸುರಹೊನ್ನೆಹೂ ಎಂಬ ಸಂಗತಿ 10ನೆ ಶತಮಾನದಲ್ಲಿ ಜೀವಿಸಿದ್ದ ತಮಿಳು ಶೈವಭಕ್ತರ 'ತೇವಾರ'ಗಳಿಂದ ತಿಳಿದುಬರುತ್ತದೆ.

ಸಂಪಗೆಯ ಮೊಗ್ಗನ್ನು ಸುಂದರವಾದ ಮೂಗಿಗೆ ಹೋಲಿಸುವುದು ಅದೇ ಕಾಲದ ಹೊತ್ತಿಗೆ ಕವಿಸಮಯವಾಗಿತ್ತು.

**ಸೇವಂತಿಗೆ** (*? Chrysanthemum indicum* L.)

ಸೇವಂತಿಗೆಯು ಕ್ರೈಸಾಂತಿಮಮ್ ಇಂಡಿಕಮ್ ಗಿಡವೆಂಬ ಅಭಿಪ್ರಾಯ ಅನೇಕರಲ್ಲಿ ನೆಲೆಯಾಗಿದೆ. 'ಇಂಡಿಕಮ್' ಎಂಬ ಹೆಸರು ಭಾರತವನ್ನೇ ಕುರಿತದ್ದು, ಭಾರತದಲ್ಲಿ ಸ್ವಾಭಾವಿಕವಾಗಿ ಬೆಳೆಯುವ ಗಿಡ ಇದು ಎಂದು ಯಾರಾದರೂ ವಾದ ಮಾಡಬಹುದು. ಆದರೆ ಈ ನಾಮದ್ವಯ ಸೃಷ್ಟಿಯಾದದ್ದು 18 ನೆಯ ಶತಮಾನದಲ್ಲಿ ಎಂಬುದನ್ನು ಮರೆಯಬಾರದು. ಕೆರೋಲ್ ಲಿನೆಯಸ್ ಆಕಾಲದಲ್ಲಿ ಜೀವಿಸಿದ್ದ ಸಸ್ಯ ಶಾಸ್ತ್ರಜ್ಞ. ಈ ಹೆಸರನ್ನು ಪೋಣಿಸಿದವನು ಅವನು. ಅವನಿಗೆ ಅನೇಕ ದೇಶಗಳಿಂದ ಸಸ್ಯಗಳು ರವಾನಿತವಾಗುತ್ತಿದ್ದವು. ಭಾರತದಿಂದಲೂ ರವಾನಿತವಾದವು. ತನಗೆ ಭಾರತದಿಂದ ಬಂದದ್ದೆಂಬುದನ್ನು ಸೂಚಿಸುವ ಸಲುವಾಗಿ ಈ ಹೆಸರನ್ನು ಬಳಸಿದನೇ ಹೊರತು, ಈ ಗಿಡ ಭಾರತದಲ್ಲಿ ಸ್ವಾಭಾವಿಕವಾಗಿ ಬೆಳೆಯುವಂಥದ್ದು, ಭಾರತದ ತೌರಿನಲ್ಲಿ ಹುಟ್ಟಿದ್ದು ಎಂಬುದನ್ನು ಸೂಚಿಸುವುದಕ್ಕಲ್ಲ.

ನಮಗೆ ಪರಿಚಿತವಾಗಿರುವ ಸೇವಂತಿ ತೋಟಗಳಲ್ಲಿ ಮಾತ್ರ ಬೆಳೆಯುತ್ತದೆ. ಹಳದಿ, ಬಿಳಿ ಜಾತಿಗಳಿವೆ. ಎಷ್ಟು ಕಾಲದಿಂದ ಈ ಗಿಡ ನಮಗೆ ತಿಳಿದಿದೆ ಎಂಬ ಪ್ರಶ್ನೆಗೆ ಉತ್ತರ ಸಿಗದು. ಆದರೆ ಇದು ಹೊರದೇಶದಿಂದ ಆಮದಾದ ಸಸ್ಯ ವಿಶೇಷವೆಂಬುದು ಮಾತ್ರ ಖಚಿತವಾದದ್ದು. ಹರಿಹರನ ಕಾಲದ ವೇಳೆಗೆ ಈ ಗಿಡ ಆಮದಾಗಿತ್ತು ಎಂದು ಹೇಳುವುದಕ್ಕೆ ಆಧಾರಗಳಿಲ್ಲ.

'ಸೇವಂತಿ' (ಇತರ ರೂಪಗಳು: ಸೇವಂತಿಗೆ, ಶಾಮಂತಿ, ಶಾಮಂತಿಗೆ) ಎಂಬ ಗಿಡವೊಂದು ನಮ್ಮಲ್ಲಿದ್ದಿರಬೇಕು. ಕವಿಗಳು ಹಾಡಿರುವುದು ಈ ಸೇವಂತಿಯನ್ನು. ಅದು ಹೇಗಿತ್ತು, ಅದರ ಅನನ್ಯತೆ ಯಾವುದು ಎಂಬುದನ್ನು ತಿಳಿಯುವುದು ಸದ್ಯಕ್ಕೆ ಸಾಧ್ಯವಿಲ್ಲ. ಗುರುತು ಹಿಡಿಯುವುದಕ್ಕೆ ಅನುವಾಗುವ ಕುರುಹುಗಳನ್ನು–ಅದರ ಹೂವಿನಲ್ಲಿ ನರುಗಂಪು ಇತ್ತು ಎಂಬೊಂದು ಸಂಗತಿಯನ್ನುಳಿದು–ತಿಳಿಸಿಲ್ಲ.

ಇಲ್ಲಿ ಒಂದು ಊಹೆಯನ್ನು–ಬರಿಯ ಊಹೆಯನ್ನು–ತಿಳಿಸಬಹುದೆ? ಇರುವಂತಿ(ದಿ)ಗೆ, ಸೇವಂತಿ(ದಿ)ಗೆ, ಎಂಬ ಪದಗಳ ಅಂತ್ಯಭಾಗ(ಅಂದಿ)ವು ಅನ್ದುಗೆ=ಅಂದುಗೆ= ಅಂದಿಗೆ ಪದಗಳೊಡನೆ ಸಾಮ್ಯ ಪಡೆಯಬಹುದೆ? ಅಂದುಗೆ ಎಂದರೆ ಹೆಜ್ಜೆಗೆ ಒಪ್ಪುವ ಆಭರಣ, ಹೆಜ್ಜೆಯನ್ನು ಆವರಿಸಿರುವ ಆಭರಣ. ಒಂದು ಕೇಂದ್ರವನ್ನು ಆವರಿಸಿಕೊಂಡಂತೆ ರಚನೆಯನ್ನು ಹೊಂದಿದ ಹೂ ಎಂದು ಬಗೆಯಬಹುದೆ? ಈ ವಿನ್ಯಾಸದಲ್ಲಿ ಹವಣಾಗಿದ್ದು ಪರಿಮಳವನ್ನೂ ಹೊಮ್ಮುವ ಹೂಗಳು ನಮ್ಮ ಕಾಡಿನಲ್ಲಿ ಅನೇಕವಿವೆ. ಹಳೆಯ ಕಾಲದ ಕವಿಗಳ ಸೇವಂತಿ ಹೆಚ್ಚುಕಡಿಮೆ ಇಂದಿನದನ್ನೇ ಹೋಲುವ ಬೇರೆ ಹೂವೊಂದಾಗಿರಬಹುದಲ್ಲವೆ?

ಸೇವಂತಿಗೆ ಹೂವಿಗೆ ಆಡುಮಾತಿನಲ್ಲಿ ಶಾವಂತಿ, ಶ್ಯಾವಂತಿ, ಶಾಮಂತಿ, ಶ್ಯಾಮಂತಿ ಎಂಬ ಪದಗಳು ಉಳಿದಿವೆ. ಶ್ಯಾಮಂತಿಗೆ ಎಂದರೆ ಕಪ್ಪುಛಾಯೆಯಿರುವ ಕಾಲ್ಗೆಜ್ಜೆಯ ನಕಾಸೆಯುಳ್ಳಿರುವ ಹೂ ಆಗಬಹುದೆ? ಇಲ್ಲಿ ಗೊಜ್ಜಗೆ ಎಂಬ ಸಸ್ಯವಿಶೇಷವನ್ನು ನೆನೆಯಬೇಕು. ಪಂಪನು ಈ ಹೂವನ್ನು ಮಸಿಗೆ ಸಮನಾದದ್ದೆಂದು ಹೇಳಿದ್ದಾನೆ. ಎಂದರೆ ಕಪ್ಪುಛಾಯೆಯುಳ್ಳದ್ದು ಎಂದಾಗುತ್ತದೆ. ಕಪ್ಪು ಎಂದರೆ ಇದ್ದಿಲಿನ ಬಣ್ಣವಲ್ಲ, ನೀಲಿ ಕೆಂಪು ಬಣ್ಣಗಳು ಅತಿತೀಕ್ಷ್ಣವಾದಾಗ ಕಪ್ಪುಛಾಯೆಗೊಳ್ಳುತ್ತವೆ. ಗೊಜ್ಜಗೆಯನ್ನು ಸೇವಂತಿಗೆ ಎಂದು ಬಗೆಯುವವರೂ ಉಂಟು. ಗೊಜ್ಜುಗೆಗೂ ಗೆಜ್ಜೆಗೂ ಸಂಬಂಧವೇನಾದರೂ ಇರಬಹುದೆ?

(ಗಿಡಮರಹೂಗಳ ಹೆಸರುಗಳಲ್ಲಿ 'ಇಗೆ' ಪ್ರತ್ಯಯವನ್ನು ಕುರಿತು ಸಂಶೋಧನೆ ನಡೆಯಬೇಕಾಗಿದೆ:

ಸೇವಂತಿ — ಸೇವಂತಿಗೆ
ಇರುವಂತಿ — ಇರುವಂತಿಗೆ
?ಗೊಜ್ಜು — ಗೊಜ್ಜುಗೆ

ಈ ಜಾತಿಯ ಜೋಡಿ ಹೆಸರುಗಳು ಇನ್ನೂ ಇವೆ.)



ಅದಿಗಲಂತಿ



ಸಂಪಿಗೆ



ಸುರಹೊನ್ನೆ







ಉನ್ಮತ್ತ



ಎಕ್ಕೆ



ದವನ



ನೆಯ್ದಿಲೆ



ಇರುವಂತಿ



ಉತ್ತರಣೆ